ಭಾಗವತಕಾರರು ಮೈಮರೆತು ಭಗವಂತನಲ್ಲಿ ತಲ್ಲೀನರಾಗಿರುತ್ತಾರೆ. ವಿಷ್ಣುಪುರಾಣದ ಎಲ್ಲ ಅಂಶಗಳ ವಿಸ್ತೃತ ನಿರೂಪಣೆ ಭಾಗವತದ ಉದ್ದೇಶವೆಂದು ತೋರುತ್ತದೆ. ಆದರೆ ವಿಷ್ಣುಪುರಾಣದ ಭಾಷಾಲಾಲಿತ್ಯ, ಸರಳತೆ ಭಾಗವತದಲ್ಲಿ ಕಂಡುಬರುವುದಿಲ್ಲ. ವಿಷಯ ಸಾಮ್ಯ, ಶಬ್ದಸಾದೃಶ್ಯ ಮುಂತಾದುವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಭಾಗವತವು ವಿಷ್ಣುಪುರಾಣದ ಭಾಷ್ಯವೆನಿಸಬಹುದು. ಹೇಗಿದ್ದರೂ ಭಾಗವತಕಾರರ ಕಣ್ಣೆದುರಿಗೆ ವಿಷ್ಣುಪುರಾಣವಿದ್ದಿತು–ಎಂದು ನಮ್ಮ ಖಚಿತವಾದ ಅಭಿಪ್ರಾಯ.

## ಪುರಾಣಗಳ ಮಹತ್ತ್ವ

ಪುರಾಣಗಳನ್ನು ಶ್ರವಣಮಾಡಿಸುವ ಸಂಪ್ರದಾಯ ನಮ್ಮ ಭರತ ಖಂಡದಲ್ಲಿ ಪ್ರಾಚೀನಕಾಲದಿಂದಲೂ ನಡೆದುಬಂದಿದೆ. ಹಳ್ಳಿಹಳ್ಳಿ ಯಲ್ಲಿಯೂ ಪಟ್ಟಣದಲ್ಲಿಯೂ ದೇವಾಲಯ ಮುಂತಾದ ಸಾರ್ವಜನಿಕ ಸ್ಥಳದಲ್ಲಿಯೂ ಸಂಜೆಯ ಹೊತ್ತು ಪುರಾಣಶ್ರವಣ ಒಂದು ಸಾಮಾನ್ಯ ದೃಶ್ಯವಾಗಿತ್ತು. ಇತ್ತೀಚೆಗೆ ಈ ಪದ್ಧತಿ ಶಿಥಿಲವಾಗುತ್ತಿರುವುದು ನಮ್ಮ ಸಂಸ್ಕೃತಿಯ ಬೆಳವಣಿಗೆಗೆ ಅಪಾಯಕಾರಿಯಾಗಿ ಪರಿಣಮಿಸುತ್ತಿದೆ. ರಾಮಾಯಣಮಹಾಭಾರತಗಳ ಸಾಮಾನ್ಯ ಪರಿಚಯವೂ ನಮ್ಮ ಮಕ್ಕಳಿಗೆ ಇಲ್ಲದಿರುವುದು ವಿಷಾದಕರ. ಧ್ರುವ, ಪ್ರಹ್ಲಾದ, ಮಾರ್ಕಂಡೇಯ, ಅಂಬರೀಷ ಮೊದಲಾದ ಭಕ್ತರ ಚರಿತೆಯಾಗಲಿ ನಳ, ಹರಿಶ್ಚಂದ್ರ, ಯಯಾತಿ ಮುಂತಾದ ಧೀರೋದಾತ್ತಪುರುಷರ ಕಥೆಯಾಗಲಿ ದಮಯಂತಿ, ಅನಸೂಯಾ, ಚಂದ್ರಮತಿ ಮುಂತಾದ ಸಾಧ್ವೀಶಿರೋಮಣಿಗಳ ವಿಚಾರವಾಗಲಿ, ಈಗಿನವರಿಗೆ ಅಪರಿಚಿತ. ಪುರಾಣಶ್ರವಣ ಪದ್ಧತಿಯು ಕ್ಷೀಣವಾಗುತ್ತಿರುವುದೇ ಇದಕ್ಕೆ ಕಾರಣ. ಅಲ್ಲದೆ, ನಮ್ಮವರಲ್ಲಿ ಬಲ್ಲವರೂ ಸಹ ಪುರಾಣದಲ್ಲೇನಿದೆ? ಎಂದು ಅಸಡ್ಡೆಯಿಂದ 'ನಿನ್ನ ಪುರಾಣ ಬೇಡ' ಎಂಬ ನಿಂದಾವಾಕ್ಯವನ್ನು ಬಳಸುವ ಮಟ್ಟಕ್ಕೆ ಹೋಗಿದ್ದಾರೆ. ಆದರೆ ವಸ್ತುಸ್ಥಿತಿ ಇವರು ತಿಳಿದುಕೊಂಡಿರುವುದಕ್ಕಿಂತ ಭಿನ್ನವಾಗಿದೆ. ಪುರಾಣವು 'ಚತುರ್ದಶ ವಿದ್ಯೆಗಳಲ್ಲೊಂದು' ಎಂದು ಪ್ರಾಚೀನರು ಹೇಳಿರುವುದು ಬರಿಯ ಪ್ರಶಂಸೆಯ ನುಡಿಯಲ್ಲ. ಸಾಮಾನ್ಯ ಜನರಿಗೆ ಅತ್ಯಾವಶ್ಯಕವಾದ ಲೌಕಿಕ ಮತ್ತು ಪಾರಮಾರ್ಥಿಕ ವಿಷಯಗಳನ್ನು ತಿಳಿಸುವುದಕ್ಕಾಗಿಯೇ ಪುರಾಣಗಳು ಹೊರಟಿವೆ ಎಂಬುದನ್ನು ಮರೆಯಕೂಡದು. ಇವುಗಳಲ್ಲಿ ಬರುವ ಕಥೆಗಳು ಅತ್ಯಂತ ರೋಚಕವಾದವು. ಕಲಿಯಬೇಕಾದ ಲೋಕನೀತಿಗಳು ಅಮೂಲ್ಯವಾದವು. ಶಾಸ್ತ್ರದ ಪೆಡಸಿಲ್ಲದೆ ಸುಲಭವಾಗಿ ವಿವರಿಸುವ ಆಧ್ಯಾತ್ಮತತ್ತ್ವಗಳು ಮನನೀಯವಾದವು. ಆನುಷಂಗಿಕವಾಗಿ ಪ್ರಸ್ತಾಪಿಸಲ್ಪಡುವ ಯೋಗ,

ಜ್ಯೌತಿಷ ಮುಂತಾದ ಸಾಹಿತ್ಯಗಳು ಅವಶ್ಯ ತಿಳಿಯಬೇಕಾದವು. ವಂಶ, ವಂಶಾನುಚರಿತಗಳಲ್ಲಿ ಬರುವ ಅತಿ ದೀರ್ಘವಾದ ಹೆಸರುಗಳ ಪಟ್ಟಿ ಬೇಸರ ತರಬಹುದಾದರೂ ಐತಿಹಾಸಿಕ ಮೌಲ್ಯ ಅದಕ್ಕುಂಟೆಂಬುದನ್ನು ಮರೆಯಬಾರದು. ಅಲ್ಲದೆ ಆಚಾರಸಂಹಿತೆ, ಧರ್ಮಸಂಹಿತೆ– ಇವು ಶಿಷ್ಟ ಜನರಿಗೆ ಉಪಯುಕ್ತವಾದವು.

ಪುರಾಣ ಕಥೆಗಳಲ್ಲಿ ಅದ್ಭುತವೂ ಅಲೌಕಿಕವೂ ಆದ ಸನ್ನಿವೇಶ ಗಳಿವೆ ಎಂಬುದು ನಿಜ. ಇದನ್ನು ನಂಬುವುದಕ್ಕಾಗುವುದಿಲ್ಲವೆಂದು ಕೆಲವರು ಆಕ್ಷೇಪಿಸುತ್ತಾರೆ. ನಂಬತಕ್ಕವರು ನಂಬಲಿ, ನಂಬದಿರು ವವರಿಗೂ ಈ ಕಥೆಗಳು ಮೌಲಿಕವಾದ ನೀತಿತತ್ತ್ವವನ್ನು ಸಾರುತ್ತವೆ– ಎನ್ನುವುದು ಸತ್ಯವೇ. ನಮ್ಮಲ್ಲಿ ಕ್ರಮಬದ್ಧವಾಗಿ ಪುರಾಣಗಳ ಶಾಸ್ತ್ರೀಯವಾದ ಅಧ್ಯಯನ ನಡೆದಿಲ್ಲ. ವೇದಾಂತಾದಿ ಶಾಸ್ತ್ರಗಳಲ್ಲಿಯೂ ಆಧುನಿಕ ವಿದ್ಯೆಗಳಲ್ಲಿಯೂ ಪರಿಣತರಾದ ವಿದ್ವಾಂಸರು ಈ ಕಾರ್ಯವನ್ನು ಶ್ರದ್ಧೆಯಿಂದ ಕೈಗೊಂಡರೆ ಭಾರತೀಯ ವಿದ್ಯೆಗೆ ಒಂದು ಮಹತ್ತರವಾದ ಸೇವೆಯನ್ನು ಸಲ್ಲಿಸಿದಂತಾಗುತ್ತದೆ.

# ೩. ವಿಷ್ಣುಪುರಾಣದ ತತ್ತ್ವವಿಚಾರ

## ವಿಷ್ಣುಪುರಾಣೋಕ್ತ ಸೃಷ್ಟಿಕ್ರಮ

ಈ ಸೃಷ್ಟಿಪ್ರಕರಣದಲ್ಲಿ ಕಾಪಿಲಸಾಂಖ್ಯ ಮತ್ತು ವೇದಾಂತ ಪ್ರಕ್ರಿಯೆಗಳ ಸಂಮಿಶ್ರಣ ಕಂಡುಬರುತ್ತದೆ. ಇವುಗಳ ಸಮನ್ವಯ ಕ್ಲಿಷ್ಟವಾದದ್ದು. ಪೂರ್ವಾಪರಗಳಿಗೆ ಅಲ್ಲಲ್ಲಿ ವಿರೋಧವು ಸ್ಥೂಲದೃಷ್ಟಿಯಿಂದ ನೋಡಿದರೆ ಕಂಡುಬರುತ್ತದೆ. ಶ್ರೀಧರೀಯ ವ್ಯಾಖ್ಯಾನದಲ್ಲಿ ಈ ಗೊಂದಲವನ್ನು ಪರಿಹರಿಸಿ, ಪೂರ್ವಾಪರಗಳಿಗೆ ಏಕವಾಕ್ಯತೆಯನ್ನು ಸಾಧಿಸಿ, ಸುಂದರವಾಗಿ ಸಮನ್ವಯವನ್ನು ತೋರಿಸಲಾಗಿದೆ. ಅವ್ಯಕ್ತ, ಮಹತ್, ಅಹಂಕಾರ, ಸೂಕ್ಷ್ಮಭೂತಗಳು–ಈ ಕ್ರಮದಿಂದ ಸೃಷ್ಟಿಯಾಯಿತೆನ್ನುವುದು ವಿಷ್ಣುಪುರಾಣೋಕ್ತವಾದ ಕ್ರಮ. ಇದು ವೇದಾಂತಿಗಳಿಗೆ ಅಗ್ರಾಹ್ಯವಲ್ಲವಾದರೂ ಜಡವಾದ ಅವ್ಯಕ್ತ (ಪ್ರಧಾನ)ದಿಂದ ಸೃಷ್ಟಿಯಾಗುತ್ತದೆ ಎಂಬುದು ಅವರಿಗೆ ಸಂಮತವಲ್ಲ. ಆದ್ದರಿಂದ ಸಾಂಖ್ಯೋಕ್ತವಾದ ಅವ್ಯಕ್ತಾದಿ ಚತುರ್ವಿಂಶತಿ ತತ್ತ್ವಗಳಿಗೆ ಮೂಲವಾಗಿ ಮಹಾಚೈತನ್ಯ ಸ್ವರೂಪವಾದ ಆತ್ಮನನ್ನು ವೇದಾಂತಿಗಳು ಅಂಗೀಕರಿಸುತ್ತಾರೆ. ವಿಷ್ಣುಪುರಾಣವು ಈ ಮಹಾಚೈತನ್ಯವನ್ನು ಒಪ್ಪಿದೆ. ಸಾಂಖ್ಯರ ಅವ್ಯಕ್ತಶಬ್ದಕ್ಕೆ ಬದಲಾಗಿ ವೇದಾಂತಿಗಳ 'ಅವಿದ್ಯೆ' ಎಂಬ ಶಬ್ದವನ್ನು ಈ ಪುರಾಣವು ಬಳಸಿರುವುದು ಗಮನಾರ್ಹವಾದುದು. ಜಗನ್ಮೂಲವಾದ ಆ ಮಹಾಚೈತನ್ಯವೇ ಪರಬ್ರಹ್ಮ. ಈ ಬ್ರಹ್ಮವು ಗುಣತ್ರಯಗಳ ಸಂಬಂಧದಿಂದ ಬ್ರಹ್ಮ, ವಿಷ್ಣು, ರುದ್ರ ರೂಪಾದಿಗಳನ್ನು ಧರಿಸುವುದೆಂದು ಹಲವಾರು ಸ್ಥಳಗಳಲ್ಲಿ ಮತ್ತೆ ಮತ್ತೆ ವರ್ಣಿಸಲಾಗಿದೆ. ಬ್ರಹ್ಮವು ನಿರ್ಗುಣವಾದರೂ ಅಗ್ನಿಯಲ್ಲಿ ಉಷ್ಣತೆಯಿರುವಂತೆ ಅದರಲ್ಲಿ ಅಚಿಂತ್ಯವಾದ ಮಹಾಶಕ್ತಿಗಳಿರುತ್ತವೆ. ಶಕ್ತಿ–ಶಕ್ತಿಮತ್ ಇವುಗಳಿಗೆ ಅಭೇದವಿರುವುದರಿಂದ ಅದ್ವೈತಕ್ಕೆ ಚ್ಯುತಿಯಿಲ್ಲ. ವಿಷ್ಣುವೇ ಇತರ ಸಗುಣಮೂರ್ತಿಗಳಲ್ಲಿ ಶ್ರೇಷ್ಠವಾದ ಮೂರ್ತಿಯೆಂಬುದು ವಿಷ್ಣುಪುರಾಣದ ಮುಖ್ಯವಾದ ನಿಲುವು. ಆದ್ದರಿಂದ ವಿಷ್ಣುವಿಗೆ ಸರ್ವೋತ್ಕರ್ಷವನ್ನು ಪ್ರತಿಪಾದಿಸಿದ್ದಾರೆ. ಬ್ರಹ್ಮ ಮತ್ತು ಶಿವ ಇವರೂ ಸಹ ಪರಬ್ರಹ್ಮದ ಸಗುಣಮೂರ್ತಿಗಳೇ ಆದ್ದರಿಂದ ಈ ತ್ರಿಮೂರ್ತಿಗಳು ಸಮಾನರೆಂದೂ ಅಭಿನ್ನರೆಂದೂ

ನಿಸ್ಸಂದೇಹವಾಗಿ ಹೇಳಬಹುದಾದ ಸಿದ್ಧಾಂತವಾಗಿದೆ. ನಾರಾಯಣನೇ ಬ್ರಹ್ಮನೆಂದು ಈ ಮಾತುಗಳು ಸ್ಪಷ್ಟಪಡಿಸುತ್ತವೆ – 'ಬ್ರಹ್ಮಾನಾರಾಯಣಾಖ್ಯೋಽಸೌ' (೪–೧) 'ಬ್ರಹ್ಮಸ್ವರೂಪೀ ಭಗವಾನ್' (೧–೪–೪) 'ಸ್ವಯಂ ವಿಶ್ವೇಶ್ವರೋ ಹರಿಃ ಬ್ರಹ್ಮಾ ಭೂತ್ವಾ' (೧–೨–೬೧) 'ಬ್ರಹ್ಮರೂಪಧರಃ ಶೇತೇ ಭಗವನಾದಿ ಕೃತ್ ಹರಿಃ' (೬–೪–೪).

ಇನ್ನೊಂದು ವಿಶೇಷವನ್ನು ಇಲ್ಲಿ ಕಾಣಬಹುದು. ಸೃಷ್ಟಿ ಮಾಡುವಾಗ ಬ್ರಹ್ಮನೇ ತನ್ನ ದೇಹವನ್ನು ನಾನಾರೂಪಗಳಾಗಿ ಪರಿವರ್ತಿಸಿದನೆಂದು ವರ್ಣಿಸಿದೆ. ಅವನೇ ಸೃಜ್ಯನೆಂದೂ ಸೃಷ್ಟಿಕರ್ತನೆಂದೂ ವರ್ಣಿಸಲಾಗಿದೆ. ಅಲ್ಲದೆ 'ನಿಮಿತ್ತಮಾತ್ರಮೇವಾಸೌ' ಎಂದೂ ವರ್ಣಿಸಿ 'ಜಗಚ್ಚ ಸಃ' ಎಂದು ಹೇಳಿರುವುದರಿಂದ ಪರಬ್ರಹ್ಮವಸ್ತುವೇ ಜಗತ್ತಿಗೆ ನಿಮಿತ್ತ ಕಾರಣವೆಂದೂ ಉಪಾದಾನ ಕಾರಣವೆಂದೂ ಸ್ಪಷ್ಟವಾಗುತ್ತದೆ. ಈ ಪ್ರಮೇಯವು ಬಾದರಾಯಣಾಚಾರ್ಯರ ಬ್ರಹ್ಮಸೂತ್ರದ ಪ್ರಕೃತ್ಯಧಿಕರಣದ (೧–೪–೨೩) ಸಿದ್ಧಾಂತವೇ ಆಗಿದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು.

ಜಗತ್ತನ್ನು ಸೃಜಿಸಬೇಕೆಂದು ಪರಮಾತ್ಮನು ರಜೋಗುಣಯುಕ್ತನಾಗಿ ಬ್ರಹ್ಮರೂಪವನ್ನು ಧರಿಸಿದಾಗ ಅವಿದ್ಯೆ ಹುಟ್ಟುತ್ತದೆ. ಈ ಅವಿದ್ಯೆಯೇ ಸಾಂಖ್ಯರ ಅವ್ಯಕ್ತವೆಂದು ಹೇಳಬಹುದು. ಅದರಿಂದ ಮಹತ್ ತತ್ತ್ವದ ಸೃಷ್ಟಿ. ಮಹತ್‌ತತ್ತ್ವಕ್ಕೆ ಬುದ್ಧಿ ಎಂದೂ ಬ್ರಹ್ಮನೆಂದೂ ಹೆಸರಿದೆ. ಕೆಲವು ಪುರಾಣಗಳಲ್ಲಿ ಈ ಮಹತ್‌ತತ್ತ್ವವನ್ನೇ ಸೃಷ್ಟಿಕರ್ತನಾದ ಬ್ರಹ್ಮನೆಂದು ವ್ಯವಹರಿಸಲಾಗಿದೆ. ಪ್ರಕೃತ, ವಿಷ್ಣುಪುರಾಣದಲ್ಲಿ ಮಹತ್ತಿನ ಸೃಷ್ಟಿಯನ್ನು ಪ್ರಥಮಸೃಷ್ಟಿಯೆಂದೂ ಅದರಿಂದ ಅಹಂಕಾರವು ಸೇರಿ ಪಂಚತನ್ಮಾತ್ರೆಗಳ ಸೃಷ್ಟಿಯಾಯಿತೆಂದೂ ನಿರೂಪಿಸಲಾಗಿದೆ. ಪಂಚತನ್ಮಾತ್ರೆಗಳೇ ಸೂಕ್ಷ್ಮಭೂತಗಳು. ಇವುಗಳಿಂದ ಇಂದ್ರಿಯ ಗೋಚರಗಳಾದ ಸ್ಥೂಲಭೂತಗಳೂ ಅಗೋಚರಗಳಾದ ಇಂದ್ರಿಯಗಳೂ ಹುಟ್ಟಿದುವು. ಅನಂತರ ಮರ ಬಳ್ಳಿಗಳೇ ಮೊದಲಾದ ಸ್ಥಾವರಗಳ ಸೃಷ್ಟಿಯಾಯಿತು. ಅನಂತರ ಕ್ರಿಮಿಕೀಟಾದಿಗಳು ಹುಟ್ಟಿದುವು. ಆಮೇಲೆ ದೇವತೆಗಳ ಸೃಷ್ಟಿ. ಕಡೆಯಲ್ಲಿ ಹುಟ್ಟಿದವರು ಮನುಷ್ಯರು (೧–೫–೧೯ ರಿಂದ ೨೩). ದೇವತೆಗಳ ಸೃಷ್ಟಿ ಕಾರ್ಯ ಸಾಧಕವಲ್ಲವೆಂದು ಬಗೆದು ಬ್ರಹ್ಮನು ಮನುಷ್ಯರನ್ನು ಸೃಷ್ಟಿಸಿದನೆಂದು ಹೇಳಿದೆ. ಈ ಮನುಷ್ಯರಿಗೆ ಸತ್ತ್ವ, ರಜಸ್ಸು, ತಮಸ್ಸು, ಈ ಮೂರೂ ಗುಣಗಳೂ ಅಧಿಕವಾಗಿವೆ. ಸುಖಕ್ಕಿಂತ ದುಃಖವು ಇವರಿಗೆ ಅಧಿಕ. ಮನುಷ್ಯರು ಅತ್ಯಂತ ಕ್ರಿಯಾಶೀಲರು. ಬಾಹ್ಯ ಮತ್ತು ಆಂತರಿಕವಾದ ಜ್ಞಾನವುಳ್ಳವರಾದ್ದರಿಂದ ಇವರೇ ಕಾರ್ಯಸಾಧಕರೆಂದು ಬ್ರಹ್ಮನಿಗೆ ಹರ್ಷವಾಯಿತಂತೆ. ದೇವತೆಗಳಿಗಿಂತ ಮನುಷ್ಯರೇ ಅಧಿಕ ಭಾಗ್ಯಸಂಪನ್ನರೆಂಬುದು ಇಲ್ಲಿ ಸೂಚಿತವಾಗಿದೆ. ಏಕೆಂದರೆ, ಈ ಜನರಿಗೆ

ಕರ್ಮಾಧಿಕಾರವಿದ್ದು ಸ್ವರ್ಗಮೋಕ್ಷಗಳೆರಡನ್ನೂ ಪಡೆದುಕೊಳ್ಳಲು ಸಾಮರ್ಥ್ಯವುಂಟು. ಆದ್ದರಿಂದಲೇ ದೇವತೆಗಳು ಭರತ ಖಂಡದ ಪ್ರಾಶಸ್ತ್ಯವನ್ನು ಈ ರೀತಿಯಲ್ಲಿ ಹೊಗಳಿದ್ದಾರೆ:

**ಗಾಯಂತಿ ದೇವಾಃ ಕಿಲ ಗೀತಕಾನಿ**
**ಧನ್ಯಾಸ್ತು ತೇ ಭಾರತಭೂಮಿಭಾಗೇ।**
**ಸ್ವರ್ಗಾಪವರ್ಗಾಸ್ಪದಮಾರ್ಗಭೂತೇ**
**ಭವಂತಿ ಭೂಯಃ ಪುರುಷಾಃ ಸುರತ್ವಾತ್॥**

(೨–೩–೨೪)

**ಜಾನೀಮ ನೈತತ್ ಕ್ವ ವಯಂ ವಿಲೀನೇ**
**ಸ್ವರ್ಗಪ್ರದೇ ಕರ್ಮಣಿ ದೇಹಬಂಧಮ್।**
**ಪ್ರಾಪ್ಸ್ಯಾಮ ಧನ್ಯಾಃ ಖಲು ತೇ ಮನುಷ್ಯಾಃ**
**ಯೇ ಭಾರತೇ ನೇಂದ್ರಿಯವಿಪ್ರಹೀನಾಃ॥**

(೨–೩–೨೬)

ವಿಷ್ಣುಪುರಾಣದಲ್ಲಿ ಬಂದಿರುವ ರಾಷ್ಟ್ರಪ್ರೇಮಪೂರಿತವಾದ ಈ ಶ್ಲೋಕವು ಗಮನಾರ್ಹವಾದದ್ದು:

**ಅತ್ರ ಜನ್ಮಸಹಸ್ರಾಣಾಂ ಸಹಸ್ರೈರಪಿ ಸತ್ತಮ।**
**ಕದಾಚಿಲ್ಲಭತೇ ಜಂತುರ್ಮಾನುಷ್ಯಂ ಪುಣ್ಯಸಂಚಯಾತ್॥**

(೨–೪–೨೩)

ಭರತ ಖಂಡದ ಎಲ್ಲೆಯನ್ನು ವಿಷ್ಣುಪುರಾಣವು ಹೀಗೆ ಹೇಳಿದೆ:

**ಉತ್ತರಂ ಯತ್ ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಮ್।**
**ವರ್ಷಂ ತದ್‌ಭಾರತಂ ನಾಮ ಭಾರತೀ ಯತ್ರ ಸಂತತಿಃ॥**

(೨–೩–೧)

ವಿಷ್ಣುಪುರಾಣದ ಪ್ರಕಾರ ಭಾರತವರ್ಷದಲ್ಲಿ ಇಂದ್ರದ್ವೀಪ ಮುಂತಾದ ಒಂಭತ್ತು ಭೇದಗಳಿವೆಯೆಂದು ತಿಳಿದುಬರುತ್ತದೆ. ಇವುಗಳಲ್ಲಿ ಎಂಟರ ಹೆಸರನ್ನು ಹೇಳಿದ್ದು ಒಂಭತ್ತನೆಯ ದ್ವೀಪದ ಹೆಸರನ್ನು ಹೇಳಿಲ್ಲ. 'ಅಯಂ ತು ನವಮಸ್ತೇಷಾಮ್' (೨–೩–೭) ಎಂದು ಮಾತ್ರ ಹೇಳಲಾಗಿದೆ. ಇಲ್ಲಿ 'ಅಯಂ' ಎಂದರೆ ಭಾರತದೇಶ ಎಂದು ವ್ಯಾಖ್ಯಾನಕಾರರು ಬರೆದಿದ್ದಾರೆ. (ನೋಡಿ: ಪ್ರಥಮ ಸಂಪುಟ ಪುಟ ೩೦೬) ವರಾಹ ಪುರಾಣದಲ್ಲಿ ಇಂದ್ರದ್ವೀಪಾದಿಗಳೊಡನೆ ಭಾರತವನ್ನೂ ಗಣಿಸಿರುವುದರಿಂದ ಈ ವ್ಯಾಖ್ಯಾನ ಪ್ರಾಮಾಣಿಕವಾದದ್ದು. ಈ ಭರತಖಂಡದ ಒಂದು ಭಾಗ 'ಭಾರತವರ್ಷ' ಎಂದು ಹೇಳಬಹುದಾಗಿದೆ. ನಮ್ಮ ಸಂಕಲ್ಪವಿಧಿಯಲ್ಲಿ 'ಭರತಖಂಡೇ ಭಾರತವರ್ಷೇ' ಎನ್ನುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಭರತಖಂಡ ಎಲ್ಲಿಯವರೆಗೆ, ಭಾರತವರ್ಷ ಎಲ್ಲಿಯವರೆಗೆ–

ಎಂದು ಎಲ್ಲೆಯನ್ನು ಗುರುತಿಸುವುದು ಕ್ಲಿಷ್ಟವಾದದ್ದು. ಈ ಭರತ ಭೂಮಿಯ ಪೂರ್ವದಲ್ಲಿ ಕಿರಾತರೂ ಪಶ್ಚಿಮದಲ್ಲಿ ಯವನರೂ ವಾಸವಾಗಿದ್ದಾರೆಂದು ಹೇಳಲಾಗಿದೆ. ಮಧ್ಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯದವರು ನೆಲೆಸಿದ್ದಾರೆ. ಧರ್ಮಶಾಸ್ತ್ರದ ವಿಧಿನಿಷೇಧಗಳೆಲ್ಲವೂ ಈ ಚತುರ್ವರ್ಣೀಯರಿಗೆ ಸಂಬಂಧಿಸಿದವುಗಳು. ಆದ್ದರಿಂದ ಇದು ಕರ್ಮಭೂಮಿ. ಉಳಿದ ದೇಶಗಳೆಲ್ಲಾ ಭೋಗಭೂಮಿಗಳು (ಅತೋಽನ್ಯಾ ಭೋಗ ಭೂಮಯಃ). ಅವರಿಗೆ ವಿಧಿನಿಷೇಧಗಳಿಲ್ಲ. ಆದರೂ ಅವರೂ ಸಹ ಭಗವಂತನನ್ನು ಇನ್ನೊಂದು ಪ್ರಕಾರದಲ್ಲಿ ಅರ್ಚಿಸುತ್ತಾರೆಂದು ಹೇಳಿದ್ದಾರೆ. ಆದ್ದರಿಂದ ಅವರಿಗೆ ಪ್ರಕಾರಾಂತರದಿಂದ ಸದ್ಗತಿಯುಂಟೆಂದು ಸೂಚಿತವಾಗುತ್ತದೆ.

ಇಲ್ಲಿ ಗಮನಾರ್ಹವಾದ ಇನ್ನೊಂದು ವಿಷಯವೇನೆಂದರೆ, ಇಂದ್ರಿಯಗಳ ಸೃಷ್ಟಿಯಾದ ಮೇಲೆ ವೃಕ್ಷಲತೆಗಳೆಂಬ ಸ್ಥಾವರಗಳ ಸೃಷ್ಟಿಯನ್ನು ವರ್ಣಿಸಿರುವುದರಿಂದ ಅವುಗಳಿಗೆ ಇಂದ್ರಿಯಗಳಿವೆಯೆಂದೂ ಸೂಚಿತವಾಗುತ್ತದೆ. 'ಅಂತಃಸಂಜ್ಞಾ ಭವಂತ್ಯೇತೇ' ಎಂಬ ಭಾರತವಚನವು ಈ ಅಭಿಪ್ರಾಯಕ್ಕೆ ಪುಷ್ಟಿಯನ್ನೀಯುತ್ತದೆ.

ವಿಷ್ಣುಪುರಾಣೋಕ್ತವಂಶಾವಳಿ: ಇದರಲ್ಲಿ ಕ್ಷತ್ರಿಯರಾಜರ ವಂಶಾವಳಿ ಪ್ರಧಾನವಾಗಿ ಬಂದಿದೆ. ಉಳಿದ ಬ್ರಾಹ್ಮಣಾದಿಗಳ ವಂಶಚರಿತೆಯಿಲ್ಲ. ಅದು ಅಸಂಖ್ಯೇಯವೂ ಅನಂತವೂ ಅನುಪಯುಕ್ತವೂ ಆಗಿರುವುದೇ ಕಾರಣವಿರಬೇಕು. ಆಧುನಿಕ ಇತಿಹಾಸದಲ್ಲಿಯೂ ಸಹ ರಾಜವಂಶವೇ ಪ್ರಧಾನವಾಗಿ ವರ್ಣನೀಯವಾಗಿರುತ್ತದೆ. ಪ್ರಕೃತ, ಪರಮಾತ್ಮನಿಂದ ಪ್ರಜಾವರ್ಗ ಸೃಷ್ಟಿಯಾಯಿತಷ್ಟೆ. ಇದರಲ್ಲಿ ರಾಜ್ಯಾರ್ಹವಾದ ಕ್ಷತ್ರಿಯ ವಂಶವು ಸೂರ್ಯವಂಶ, ಚಂದ್ರವಂಶ ಎಂದು ಎರಡು ವಿಭಾಗವುಳ್ಳದ್ದು. ಇವೆರಡನ್ನು ಪರಿಶೀಲಿಸಿದಾಗ ಕುತೂಹಲಕರವೂ ಪ್ರಾಚ್ಯವಿದ್ಯಾ ಶೋಧಕರಿಗೆ ಉಪಯುಕ್ತವೂ ಆದ ಸಂಗತಿಯು ಗೋಚರಿಸುತ್ತದೆ. ಗಮನಾರ್ಹವಾದ ವಂಶಪರಂಪರೆಯನ್ನೂ ಕುತೂಹಲಕರವಾದ ಕೆಲವು ಅಂಶಗಳನ್ನೂ ಇಲ್ಲಿ ಬರೆಯಲು ಉದ್ದೇಶಿಸಲಾಗಿದೆ.

ಸೂರ್ಯವಂಶ: ವಿಷ್ಣು–ಬ್ರಹ್ಮ–ದಕ್ಷ–ವಿವಸ್ವಾನ್ (ಸೂರ್ಯ) ಇದು ಉಪಕ್ರಮ. ವಿವಸ್ವಂತನಿಂದ ಮನು, ಮನುವಿಗೆ ಇಕ್ಷ್ವಾಕು ಮೊದಲಾದ ದಶಪುತ್ರರು ಜನಿಸುತ್ತಾರೆ. ಈ ವಂಶದಲ್ಲಿ ಮರುತ್ತು, ಮಾಂಧಾತಾ, ತ್ರಿಶಂಕು, ಹರಿಶ್ಚಂದ್ರ, ಸಗರ, ಭಗೀರಥ, ಋತುಪರ್ಣ, ದಶರಥ, ಶ್ರೀರಾಮ, ಅಗ್ನಿವರ್ಣ, ಶೀಘ್ರಗ, ಮರು ಇವರು ಸ್ಮರಣೀಯರಾದ ರಾಜರು. ಮರುರಾಜನು ಯೋಗಧಾರಣೆ ಮಾಡಿ ಇಂದಿಗೂ ಕಲಾಪಗ್ರಾಮದಲ್ಲಿ

ವಾಸವಾಗಿದ್ದಾನೆಂದೂ ಮುಂದಿನ ಕೃತಯುಗದಲ್ಲಿ ಸೂರ್ಯವಂಶವನ್ನು ಸ್ಥಾಪಿಸುವನೆಂದೂ ಹೇಳಲಾಗಿದೆ. ಇಕ್ಷ್ವಾಕುವಂಶವು ಸುಮಿತ್ರನೆಂಬ ರಾಜನವರೆಗೆ ನಡೆಯುವದೆಂದು ತಿಳಿಸಲಾಗಿದೆ. 'ಇಕ್ಷ್ವಾಕೂಣಾಮಯಂ ವಂಶಃ ಸುಮಿತ್ರಾಂತೋ ಭವಿಷ್ಯತಿ' (೪-೨೨-೧೩).

ಈ ಸೂರ್ಯವಂಶದಲ್ಲಿ ಇಕ್ಷ್ವಾಕುವಿನ ಮಗ 'ನಿಮಿ'ಯಿಂದ ಇನ್ನೊಂದು ಕವಲು ಒಡೆಯುತ್ತದೆ. ಇದರಲ್ಲಿ ಜನಕವೈದೇಹ, ಸೀತೆಯ ತಂದೆಯಾದ ಸೀರಧ್ವಜ ಜನಕ ಮುಂತಾದ ರಾಜರು ಜನಿಸಿದ್ದಾರೆ. 'ಕೃತಿ' ಎಂಬ ರಾಜನವರೆಗೆ ನಿಮಿವಂಶ ನಡೆಯುತ್ತದೆ. ಶ್ರೀರಾಮ ಮತ್ತು ಜನಕರಾಜ ಇವರಿಬ್ಬರಿಗೂ ಇಕ್ಷ್ವಾಕುವೇ ಮೂಲಪುರುಷ. ಜನಕವಂಶದವರೆಲ್ಲ ಆತ್ಮವಿದ್ಯಾಪರಿಣತರು.

ಚಂದ್ರವಂಶ: ವಿಷ್ಣು-ಬ್ರಹ್ಮ-ಅತ್ರಿ-ಚಂದ್ರ-ಬುಧ-ಪುರೂರವ ಇದು ಚಂದ್ರವಂಶದ ಉಪಕ್ರಮ. ಸೂರ್ಯವಂಶಕ್ಕಿಂತ ಈ ವಂಶವು ತುಂಬ ವಿಸ್ತೃತವಾಗಿ ಕಂಡುಬರುತ್ತದೆ ಪುರೂರವನಿಂದ ಜಹ್ನು-(ವಿಶ್ವಾಮಿತ್ರರ ತಂದೆಯಾದ) ಗಾಧಿ, ಇವರ ಪರಂಪರೆ ಒಂದು ಶಾಖೆ. ಪುರೂರವನ ಮಗ ಆಯುವಿನಿಂದ ನಹುಷ-ಧನ್ವಂತರಿ-ಯಯಾತಿ-ಯದು-ಕಾರ್ತವೀರ್ಯ ಮೊದಲಾದವರ ಪರಂಪರೆ ಇನ್ನೊಂದು ಶಾಖೆ. ಮೇಲೆ ಹೇಳಿದ ಧನ್ವಂತರಿ ಆಯುರ್ವೇದಶಾಸ್ತ್ರದ ಪ್ರತಿಷ್ಠಾಪಕನೆಂದು ಹೇಳಿದ್ದಾರೆ. ಸಮುದ್ರಮಥನಕಾಲದಲ್ಲಿ ಧನ್ವಂತರಿ ಉದಿಸಿದನೆಂಬ ಪುರಾಣಾಂತರದ ಕಥೆಯೊಡನೆ ಇದರ ಸಾಮಂಜಸ್ಯ ಕ್ಲಿಷ್ಟವಾದದ್ದು. ಇಲ್ಲಿ ಹೇಳಿದ ಯದು ಶ್ರೀಕೃಷ್ಣ ಯಾದವವಂಶದ ಮೂಲಪುರುಷನೇ ಆಗಿದ್ದಾನೆ. ಈತನು ಕಾರ್ತವೀರ್ಯನಿಗಿಂತ ಹಿಂದಿನವನಾದ್ದರಿಂದ ತ್ರೇತಾಯುಗದವನೆಂದಾದರೂ ಒಪ್ಪಬೇಕಾಗುತ್ತದೆ. ಅಲ್ಲಿಗೆ ಯದುವಿಗೂ ಶ್ರೀಕೃಷ್ಣನಿಗೂ ನಡುವೆ ಅತಿದೀರ್ಘವಾದ ಕಾಲ ಸಂದುಹೋಗಿದೆಯೆಂದು ತಿಳಿಯಬೇಕು. ಯದುವಂಶದಲ್ಲಿ ಮಧು-ವೃಷ್ಣಿ-ಸತ್ವತ ಎಂಬವರು ಜನಿಸಿದ್ದರಿಂದ ಶ್ರೀಕೃಷ್ಣನು ಮಾಧವ, ವಾರ್ಷ್ಣೇಯ, ಸಾತ್ವತ ಎಂದು ಅಲ್ಲಲ್ಲಿ ಉಕ್ತನಾಗಿದ್ದಾನೆ. ಈ ಪ್ರಸಂಗದಲ್ಲಿ ಕುತೂಹಲಕಾರಿಯಾದ ಒಂದು ಸಂಗತಿ ಬಂದಿದೆ. ಜ್ಯಾಮಘ ಎಂಬವನು ಯದುವಂಶದಲ್ಲಿ ಜನಿಸಿರುತ್ತಾನೆ. ಇವನು ಭಾರ್ಯಾವಶ್ಯ ಹೆಂಡತಿಗೆ ಹೆದರುವವನು ಎಂದು ವಿಸ್ತೃತವಾಗಿ ವರ್ಣಿಸಲಾಗಿದೆ. ಇವನಿಗೆ ಸಮಾನರಾದ ಭಾರ್ಯಾವಶ್ಯರೇ ಇಲ್ಲ!

**ಭಾರ್ಯಾವಶ್ಯಾಸ್ತು ಯೇ ಕೇಚಿತ್ ಭವಿಷ್ಯಂತ್ಯಥವಾ ಮೃತಾಃ।**
**ತೇಷಾಂ ತು ಜ್ಯಾಮಘಃ ಶ್ರೇಷ್ಠಃ ಶೈಬ್ಯಾಪತಿರಭೂನ್ನೃಪಃ॥**
**(೪-೧೨-೧೩)**

ಈ ಯದುವಂಶದಲ್ಲಿ ಹುಟ್ಟಿದ ಶೂರನ ಮಗ ವಸುದೇವ. ವಸುದೇವನ ತಾಯಿ ಮಾರಿಷಾ. ಪೃಥಾ (ಕುಂತಿ), ಶ್ರುತದೇವಾ, ಶ್ರುತಶ್ರವಸ್ ಎಂಬುವರು ವಸುದೇವನ ಸೋದರಿಯರು. ಪೃಥೆಯನ್ನು ಕುಂತೀಭೋಜನಿಗೆ ದತ್ತಪುತ್ರಿಯಾಗಿ ಕೊಟ್ಟದ್ದರಿಂದ ಅವಳಿಗೆ ಕುಂತಿ ಎಂದು ಹೆಸರು ಪ್ರಸಿದ್ಧಿಗೆ ಬಂದಿತು. ಕುಂತಿಯ ಮಕ್ಕಳು ಪಾಂಡವರೆಂಬುದು ಪ್ರಸಿದ್ಧ. ಇವಳ ಸೋದರಿಯಾದ ಶ್ರುತದೇವಾ ಎಂಬವಳ ಮಗ ದಂತವಕ್ರ, ಶ್ರುತಶ್ರವಸ್ಸಿನ ಮಗ ಶಿಶುಪಾಲ. ಪಾಂಡವರೂ ಶಿಶುಪಾಲ ದಂತವಕ್ರರೂ ಅಕ್ಕತಂಗಿಯರ ಮಕ್ಕಳಾಗುತ್ತಾರೆ. ಶ್ರೀಕೃಷ್ಣನಿಗೆ ಪಾಂಡವರೂ ಶಿಶುಪಾಲನೂ ಸೋದರತ್ತೆಯ ಮಕ್ಕಳಾಗುತ್ತಾರೆ. ಮುಂದೆ ಶ್ರೀಕೃಷ್ಣನ ವಂಶವು ಪ್ರದ್ಯುಮ್ನ–ಅನಿರುದ್ಧ–ವಜ್ರ–ಪ್ರತಿಬಾಹು–ಸುಚಾರು ಎಂಬವರವರೆಗೆ ನಡೆಯುತ್ತದೆ. ಯಯಾತಿಯ ಇನ್ನೊಬ್ಬ ಮಗನಾದ ಪುರುವಿನ ವಂಶದಲ್ಲಿ ದುಷ್ಯಂತನು ಜನಿಸುತ್ತಾನೆ. ಈ ವಂಶದ 'ಹಸ್ತಿನ' ಎಂಬವನಿಂದ ಸ್ಥಾಪಿತವಾದದ್ದು ಹಸ್ತಿನಾವತೀ ನಗರ. ಹಸ್ತಿನನ ಮಗ ಅಮೀಢ. ಆತನ ಮಗ ದಿವೋದಾಸ. ದಿವೋದಾಸನ ಸೋದರಿ ರಾಮಾಯಣದಲ್ಲಿ ಬರುವ ಅಹಲ್ಯೆ ಎಂಬುದು ಸೋಜಿಗದ ಸಂಗತಿ. ಅಹಲ್ಯೆಯ ಮಗನಾದ ಶತಾನಂದನ ಪುತ್ರ ಸತ್ಯಧೃತಿ ಎಂಬ ಬ್ರಾಹ್ಮಣನು ಧನುರ್ವೇದಜ್ಞನಾಗಿದ್ದನು. ಈತನ ಮಗನೇ ಮಹಾಭಾರತದಲ್ಲಿ ಬರುವ ಕೃಪಾಚಾರ್ಯ. ಈ ದಿವೋದಾಸನ ವಂಶದಲ್ಲಿಯೇ ಕುರುರಾಜನು ಹುಟ್ಟುತ್ತಾನೆ. ಅವನಿಂದ ಬೃಹದ್ರಥ, ಜರಾಸಂಧ, ಮೊದಲಾದವರ ಒಂದು ವಂಶಶಾಖೆಯು ಬೆಳೆಯುತ್ತದೆ. ಇನ್ನೊಂದು ಶಾಖೆಯಲ್ಲಿ ಜಹ್ನು–ಶಂತನು–ಕೌರವ ಪಾಂಡವರು ಮುಂತಾದವರ ಶಾಖೆ ಬೆಳೆಯುತ್ತದೆ. ಏವಂಚ ಪಾಂಡವರಿಗೆ ಜರಾಸಂಧನು ದಾಯಾದ ಬಂಧುವಾಗುತ್ತಾನೆ. ಈ ಪಾಂಡವರ ವಂಶವು ಕ್ಷೇಮಕ–ಎಂಬ ರಾಜನವರೆಗೆ ನಡೆದು ಸಮಾಪ್ತವಾಗುತ್ತದೆ. ಇತ್ತ ಜರಾಸಂಧನ ವಂಶವು ರಿಪುಂಜಯನೆಂಬ ರಾಜನವರೆಗೆ ನಡೆದು ಕೊನೆಗೊಳ್ಳುತ್ತದೆ. ಅವನ ಅಮಾತ್ಯನಾದ ಸುನಿಕನು ರಿಪುಂಜಯನನ್ನು ಕೊಂದು, ಪ್ರದ್ಯೋತನೆಂಬ ತನ್ನ ಪುತ್ರನಿಗೆ ಪಟ್ಟಕಟ್ಟುತ್ತಾನೆ. ಅನಂತರ ಮಗಧರ ರಾಜ್ಯವು ಬೇರೆ ಬೇರೆ ಆಡಳಿತದಾರರಿಗೆ ಹಸ್ತಾಂತರಿತವಾಗಿ ಮಹಾಪದ್ಮ ಎಂಬ ರಾಜನವರೆಗೆ ಬರುತ್ತದೆ. ಇವನಿಗೆ 'ನಂದ' ಎಂಬ ಇನ್ನೊಂದು ಹೆಸರಿತ್ತು. ಈತನು ಮಹಾಶೂರನಾಗಿದ್ದು ಸಮಸ್ತರಾಜರನ್ನೂ ಸ್ವಾಧೀನಪಡಿಸಿಕೊಂಡಿದ್ದನು. ಈ ಮಹಾಪದ್ಮನ ತಂದೆ ಮಹಾನಂದಿ. ತಾಯಿ ಶೂದ್ರಜಾತಿಯವಳು. ಈತನೂ ಈತನ ಎಂಟುಮಂದಿ ಮಕ್ಕಳೂ ಸೇರಿ ನವನಂದರೆಂದು ವಿಖ್ಯಾತರಾಗಿದ್ದಾರೆ. ಈ ನಂದರನ್ನು ಸಂಹರಿಸಿ, ಕೌಟಿಲ್ಯನು ಚಂದ್ರಗುಪ್ತನಿಗೆ ಪಟ್ಟಾಭಿಷೇಕ ಮಾಡಿದನೆಂಬುದು ಇತಿಹಾಸ ಪ್ರಸಿದ್ಧವಾದ ಸಂಗತಿ. ಯಾದವರೂ ಜರಾಸಂಧಾದಿಗಳು ಚಂದ್ರವಂಶೀಯರೆಂಬುದು ನೆನಪಿನಲ್ಲಿಡಬೇಕಾದದ್ದು.

ಚಂದ್ರವಂಶದಲ್ಲಿ ದೇವಾಪಿ ಎಂಬ ರಾಜನು ಯೋಗಾರೂಢನಾಗಿ, ಸೂರ್ಯವಂಶದ ಮರುವಿನಂತೆ ಕಲಾಪಗ್ರಾಮದಲ್ಲಿ ನೆಲೆಸಿದ್ದು ಮುಂದೆ ಚಂದ್ರವಂಶದ ಕ್ಷತ್ರಿಯಕುಲವನ್ನು ಬೆಳೆಸುತ್ತಾನೆಂದು ತಿಳಿಸಲಾಗಿದೆ.

ಚಮತ್ಕಾರಿಯಾದ ಮತ್ತೊಂದು ಸಂಗತಿ ಏನೆಂದರೆ, ಯಯಾತಿ ಪುತ್ರನಾದ 'ಅನು'ವಿನ ವಂಶದಲ್ಲಿ ದಿವಿರಥ, ಧರ್ಮರಥ, ಚಿತ್ರರಥ ಎಂಬುವರು ಕ್ರಮವಾಗಿ ಜನಿಸುತ್ತಾರೆ. ಚಿತ್ರರಥನಿಗೆ 'ರೋಮಪಾದ' ಎಂಬ ಇನ್ನೊಂದು ಹೆಸರಿತ್ತು. ಇವನಿಗೆ ಸಂತತಿ ಇರಲಿಲ್ಲ. ಆದ್ದರಿಂದ ಇವನ ಮಿತ್ರನಾದ ದಶರಥನು (ಶ್ರೀರಾಮನ ತಂದೆ) ತನ್ನ ಮಗಳಾದ ಶಾಂತಾ ಎಂಬುವಳನ್ನು ರೋಮಪಾದನಿಗೆ ದತ್ತುಕೊಟ್ಟಿದ್ದನು (೪-೧೮-೧೫ ರಿಂದ ೧೮). ಈ ಹೇಳಿಕೆಗೆ ವಿರುದ್ಧವಾದ ಹೇಳಿಕೆ 'ಹರಿವಂಶ'ದಲ್ಲಿ ಕಂಡುಬರುತ್ತದೆ.

"ಧರ್ಮರಥನ ಮಗ ಚಿತ್ರರಥ. ಚಿತ್ರರಥನ ಮಗ ದಶರಥ. ಇವನಿಗೆ ರೋಮಪಾದ ಎಂಬ ಮತ್ತೊಂದು ಹೆಸರಿತ್ತು. ಈತನಿಗೆ ಶಾಂತ ಎಂಬ ಮಗಳಿದ್ದಳು" (ಹರಿವಂಶ-೧೩-೪೪ ರಿಂದ ೪೬). ವಿಷ್ಣುಪುರಾಣದ ಪ್ರಕಾರ ಚಿತ್ರರಥನೆಂಬ ರೋಮಪಾದನಿಗೆ ದಶರಥಪುತ್ರಿಯಾದ ಶಾಂತಾ ದತ್ತಪುತ್ರಿಯಾಗುತ್ತಾಳೆ. ಹರಿವಂಶದ ಪ್ರಕಾರ ದಶರಥನೆಂಬ ರೋಮಪಾದನಿಗೆ ಶಾಂತಾ ಎಂಬ ಮಗಳಿರುತ್ತಾಳೆ. ಇಲ್ಲಿ ರೋಮಪಾದನ ನಿಜವಾದ ಹೆಸರೇನೆಂಬುದು ಈ ಗ್ರಂಥಗಳಲ್ಲಿ ಪರಸ್ಪರ ವಿರುದ್ಧವಾಗಿದೆ. ಶಾಂತ ಎಂಬವಳು ರೋಮಪಾದನ ಔರಸಪುತ್ರಿಯೋ ಅಥವಾ ದತ್ತಕಪುತ್ರಿಯೋ ಎಂಬುದು ಹರಿವಂಶದಲ್ಲಿ ಸ್ಪಷ್ಟವಾಗಿಲ್ಲ.

## ಶ್ರೀಕೃಷ್ಣ ಚರಿತೆ

ವಿಷ್ಣುಪುರಾಣದ ಪಂಚಮಾಂಶವು ಶ್ರೀಕೃಷ್ಣಚರಿತೆಗೆ ಮೀಸಲಾಗಿದೆ. ವಿಷ್ಣುವಿನ ಅವತಾರಗಳಲ್ಲಿ ಶ್ರೀರಾಮ ಮತ್ತು ಶ್ರೀಕೃಷ್ಣ ಇವರಿಬ್ಬರ ಕಥಾನಕ ಸುಪ್ರಸಿದ್ಧವಾದದ್ದು. ಶ್ರೀರಾಮಚರಿತೆಗೆ ವಾಲ್ಮೀಕಿಮುನಿಗಳ ಶ್ರೀಮದ್‌ರಾಮಾಯಣವು ಮೀಸಲಾಗಿರುವುದರಿಂದ ಶ್ರೀಕೃಷ್ಣ ಚರಿತೆಯನ್ನು ಇಲ್ಲಿ ವಿಸ್ತರಿಸಬೇಕೆಂದು ಪುರಾಣಕಾರರ ಆಶಯವಾಗಿರಬಹುದು. ಶ್ರೀಕೃಷ್ಣನು ವಿಷ್ಣುವಿನ ಪೂರ್ಣಾವತಾರವೆಂಬ ಹೇಳಿಕೆ ಉಂಟು. ವಿಷ್ಣುಪುರಾಣದಲ್ಲಿಯಾದರೋ ಈತನು ಪರಮಾತ್ಮನ ಅಂಶವೆಂದು ಹಲವಾರು ಕಡೆಗಳಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ.

**ಅಂಶಾವತಾರೋ ಬ್ರಹ್ಮರ್ಷೇ ಯೋಽಯಂ ಯದುಕುಲೋದ್ಭವಃ।**
**(೫-೧-೨)**

**ವಿಷ್ಣೋರಂಶೇ ಭುವಂ ಯಾತೇ :**

**ಯೋಽಹಮಂಶಾವತೀರ್ಣಸ್ಯ ಮುಖಂ ದ್ರಕ್ಷ್ಯಾಮಿ ಚಕ್ರಿಣಃ।**
**(೫–೧೭–೨)**

**ಭಗವದ್ ವಸುದೇವಾಂಶೋ ದ್ವಿಧಾ ಯೋಽಯಂ ವ್ಯವಸ್ಥಿತಃ।**
**(೫–೧೮–೨೬)**

**ಅಂಶೇನ ಲೋಕಮಾಯಾತಃ ಪ್ರಸಾದಸುಮುಖಃ ಪ್ರಭೋ।**
**(೫–೨೯–೨೫)**

ಬಹುಶಃ ಶ್ರೀಕೃಷ್ಣಾವತಾರದಲ್ಲಿ ಶಂಖಚಕ್ರಾದಿಗಳ ಧಾರಣೆಯೂ ಗರುಡಾರೋಹಣವೂ ಹಲವಾರು ಅಮಾನುಷಲೀಲೆಗಳೂ, ವರ್ಣಿತವಾಗಿರುವುದರಿಂದ ಉಳಿದ ಅವತಾರಗಳ ಅಪೇಕ್ಷೆಯಿಂದ ನೋಡಿದಾಗ ಇದು ಪೂರ್ಣಾವತಾರ ಎಂಬ ಹೇಳಿಕೆ ಬಂದಿರಬಹುದು.

ಈ ಪಂಚಮಾಂಶವು ಶ್ರೀಕೃಷ್ಣಚರಿತೆಯನ್ನು ವರ್ಣಿಸುವ ಒಂದು ಸುಂದರ ಕಾವ್ಯವಾಗಿದೆ. ಇದರಲ್ಲಿ ಪೌರಾಣಿಕ ಅಂಶಗಳಿಗಿಂತ ಕಾವ್ಯಾಂಶಗಳೇ ಅಧಿಕವಾಗಿವೆ. ಶರದ್ ವರ್ಣನೆ, ರಾಸಕ್ರೀಡೆ, ಗೋಪೀವಿರಹ, ಕುಬ್ಜಾಪ್ರಸಂಗ, ಪಾರಿಜಾತಹರಣ, ಉಷಾಚರಿತೆ–ಮೊದಲಾದುವು ಬಹು ಮನೋಜ್ಞವಾಗಿ ಚಿತ್ರಿತವಾಗಿವೆ. ಕಡೆಯಲ್ಲಿ ಶ್ರೀಕೃಷ್ಣಾವತಾರವು ಸಮಾಪ್ತವಾದಮೇಲೆ ದಸ್ಯುಗಳಿಂದ ಅರ್ಜುನನ ಪರಾಭವ, ಆತನ ಶೋಕಾಲಾಪಗಳು, ವ್ಯಾಸರ ಸಮಾಧಾನೋಕ್ತಿ–ಇವು ಅವಶ್ಯವಾಗಿ ಸಹೃದಯರ ಗಮನವನ್ನು ಸೆಳೆಯುತ್ತವೆ. ಅರ್ಜುನನ ವಿಷಾದಪ್ರಸಂಗವು ಮಹಾಭಾರತದಲ್ಲಿರುವುದಕ್ಕಿಂತ ಮನೋಹರವಾಗಿ ಇಲ್ಲಿ ನಿರೂಪಿತವಾಗಿದೆ. ಶ್ರೀಕೃಷ್ಣನು ಇದರಲ್ಲಿ ಬರುವುದಿಲ್ಲ. ಗೋಪೀವಸ್ತ್ರಾಪಹರಣದ ಕಥೆಯ ಪ್ರಸ್ತಾಪವೇ ವಿಷ್ಣುಪುರಾಣದಲ್ಲಿ ಬಂದಿಲ್ಲವೆಂಬುದು ಗಮನಾರ್ಹವಾದ ಸಂಗತಿ.

## ಎರಡು ವಿರೋಧಾಭಾಸಗಳು

ಅಕ್ರೂರನು ಶ್ರೀಕೃಷ್ಣನ ಮಹಿಮೆಯನ್ನರಿತವನೂ ಭಗವದ್ ಭಕ್ತನೂ ಆಗಿದ್ದನು. ಅಂಥವನು ಶ್ಯಮಂತಕಮಣಿ ಪ್ರಸಂಗದಲ್ಲಿ ವರ್ತಿಸಿದ ರೀತಿ ವಿಚಿತ್ರವಾಗಿ ತೋರುತ್ತದೆ. ಸತ್ರಾಜಿತನನ್ನು ವಧಿಸುವ ಸಂಚಿನಲ್ಲಿ ಭಾಗಿಯಾಗಿದ್ದುದಲ್ಲದೆ ಶ್ಯಮಂತಕಮಣಿಯನ್ನು ಶ್ರೀಕೃಷ್ಣನಿಗೆ ಗೊತ್ತಾಗದಂತೆ ಗುಪ್ತವಾಗಿ ತನ್ನಲ್ಲಿ ಇಟ್ಟುಕೊಂಡಿರುತ್ತಾನೆ. ತನಗೆ ಪೂಜ್ಯನಾದ ಶ್ರೀಕೃಷ್ಣನಿಗೆ ತನ್ನಿಂದಲೇ ದ್ರೋಹ ಚಿಂತನೆಯಾದದ್ದು ವಿರೋಧಾಭಾಸವಾಗಿ ಕಾಣುತ್ತದೆ.

ಅಂತೆಯೇ ಭಾಗವತ ಶಿರೋಮಣಿಯೂ ಅತ್ಯಂತ ಸಜ್ಜನನೂ ಆದ ಉದ್ಧವನು ದುರುಳನಾದ ಕಂಸನ ಸೇವೆಯಲ್ಲಿದ್ದು ಆತನ ವಿಶ್ವಾಸಕ್ಕೆ ಪಾತ್ರನಾಗಿದ್ದುದು ಸೋಜಿಗದ ಸಂಗತಿ.

## ಕಲಿಯುಗದ ಪ್ರಸ್ತಾವ

ಸಾಮಾನ್ಯವಾಗಿ ಎಲ್ಲ ಪುರಾಣಗಲ್ಲಿಯೂ ಒಂದಲ್ಲ ಒಂದು ಕಡೆ ಕಲಿಯುಗದ ಪ್ರಸ್ತಾವ ಬಂದಿರುತ್ತದೆ. ಆ ಕಾಲದಲ್ಲಿ ಅಧರ್ಮ ತಾಂಡವವಾಡುವುದೆಂದು ಬರುವ ವರ್ಣನೆ ಸಹಜವಾಗಿರುತ್ತದೆ. ವಿಷ್ಣುಪುರಾಣದಲ್ಲಿ ಕಲಿಯುಗದ ವಿಚಾರ ಸಂದರ್ಭೋಚಿತವಾಗಿ ಬಂದಿದ್ದು ಅತ್ಯಂತ ರಸವತ್ತಾಗಿದೆ. ವಂಶಪರಂಪರೆಯನ್ನು ಹೇಳುತ್ತ ಮಹಾಪದ್ಮನಂದನನ ವರೆಗೆ ಅನುಕ್ರಮಿಸಿ "ತತಃ ಪ್ರಭೃತಿ ಶೂದ್ರಾ ಭೂಪಾಲಾ ಭವಿಷ್ಯಂತಿ" ಎಂಬುದು ಅರ್ಥವತ್ತಾಗಿದೆ. ಕ್ರಿ.ಪೂ. ೪೧೦ರಲ್ಲಿ ಮಹಾಪದ್ಮನಂದನ ಪಟ್ಟಾಭಿಷೇಕವಾದಂತೆ ತಿಳಿದುಬರುತ್ತದೆ. ಅದಕ್ಕೆ ೧೫೦೦ ವರ್ಷಗಳ ಹಿಂದೆ ಪರೀಕ್ಷಿತನ ಜನ್ಮಕಾಲವೆಂದು ವಿಷ್ಣುಪುರಾಣದ ವಚನಗಳಿಂದ ಗೊತ್ತಾಗುತ್ತದೆ. ಆಗಲೇ ಕಲಿಯ ಪ್ರವೇಶವಾಗಿತ್ತು. ಶ್ರೀಕೃಷ್ಣನು ತನ್ನ ಅವತಾರವನ್ನು ಸಮಾಪ್ತಿಗೊಳಿಸಿದ ಮೇಲೆ ಕಲಿಯು ದೃಢಮೂಲವಾಯಿತು. ಅನಂತರ ಅಧರ್ಮವು ವರ್ಧಿಸುತ್ತ ಹೋಗುವುದು. ಆಗ ರಾಜ್ಯಾಧಿಕಾರವನ್ನು ನಿರ್ವಹಿಸತಕ್ಕವರ ವರ್ತನೆ ಹೇಗಿರುವುದೆಂಬುದನ್ನು ಬಹು ಸುಂದರವಾಗಿ ವರ್ಣಿಸಲಾಗಿದೆ. ವಾಚಕರು ಈ ಪ್ರಕರಣವನ್ನು ಅವಶ್ಯವಾಗಿ ಓದಿ ನೋಡಬೇಕು (೪-೨೪-೧೨೩ ರಿಂದ ೧೫೧).

ಕಲಿಯುಗದಲ್ಲಿ ಮೂರು ಅಂಶಗಳು ಸುಲಭವಾಗಿದ್ದು ಪ್ರಜೆಗಳ ಶ್ರೇಯಸ್ಸಿಗೆ ಕಾರಣವಾಗುತ್ತವೆ-ಎಂದು ವಿಷ್ಣುಪುರಾಣ ಹೇಳುತ್ತದೆ. ಏನೆಂದರೆ, ಕೃತಯುಗದಲ್ಲಿ ದೀರ್ಘವಾದ ತಪಸ್ಸಿನಿಂದ, ತ್ರೇತಾಯುಗದಲ್ಲಿ ಯಜ್ಞಗಳಿಂದ, ದ್ವಾಪರಯುಗದಲ್ಲಿ ಭಗವಂತನನ್ನು ವಿಧಿಪೂರ್ವಕವಾಗಿ ಅರ್ಚಿಸುವುದರಿಂದ ಯಾವ ಫಲವು ಲಭಿಸುತ್ತಿತ್ತೋ ಅದು ಕಲಿಯುಗದಲ್ಲಿ ಹರಿನಾಮಕೀರ್ತನದಿಂದ ಸರ್ವರಿಗೂ ದೊರಕುತ್ತದೆ. ಅಲ್ಪಾಯಾಸದಿಂದಲೇ ಮಹತ್ತರವಾದ ಧರ್ಮಪ್ರಾಪ್ತಿಯಾಗುತ್ತದೆ. ಸ್ತ್ರೀಯರು ತ್ರಿಕರಣಪೂರ್ವಕವಾಗಿ ಪತಿಸೇವೆ ಮಾಡುವುದರಿಂದಲೇ ಆತನ ಎಲ್ಲ ಪುಣ್ಯಗಳಿಗೂ ಪಾಲುದಾರಳಾಗುತ್ತಾಳೆ. ಶೂದ್ರನಿಗೆ ಭಕ್ಷ್ಯಾಭಕ್ಷ್ಯ ನಿಯಮವಾವುದೂ ಕಲಿಯುಗದಲ್ಲಿಲ್ಲ. ನಿಷ್ಠೆಯಿಂದ ತನ್ನ ಕರ್ತವ್ಯವನ್ನು ಪಾಲಿಸುವುದರಿಂದಲೇ ಸದ್ಗತಿಯನ್ನು ಪಡೆಯುತ್ತಾನೆ. ಹೀಗೆ ಹಲವು ವಿಧಗಳಲ್ಲಿ ಕಲಿಯುಗವು ಶ್ರೇಯಸ್ಸಾಧನೆಗೆ ಲಘು ಉಪಾಯದಿಂದಲೇ

ಸಿದ್ಧಿಯನ್ನುಂಟುಮಾಡುತ್ತದೆ. ಮಾನವಜಾತಿಯ ಮನೋದೌರ್ಬಲ್ಯವನ್ನೂ ಧರ್ಮನಿಷ್ಠೆಯಲ್ಲಿ ಶ್ರದ್ಧೆಯ ಶೈಥಿಲ್ಯವನ್ನೂ ಅನುಲಕ್ಷಿಸಿ ಶ್ರೇಯಸ್ಸಿಗೆ ಸುಲಭೋಪಾಯವನ್ನು ತೋರಿಸಿಕೊಟ್ಟ ಪುರಾಣಕರ್ತೃಗಳಿಗೆ ನಾವು ಕೃತಜ್ಞರಾಗಿರಬೇಕು.

## ಅಧ್ಯಾತ್ಮ

ಈ ಮೊದಲು ವಿಷ್ಣುಪುರಾಣ ಪ್ರತಿಪಾದ್ಯವಾದ ಅಧ್ಯಾತ್ಮತತ್ತ್ವವನ್ನು ಸಂಕ್ಷೇಪವಾಗಿ ತಿಳಿಸಲಾಗಿದೆಯಷ್ಟೆ. ಇದು ಔಪನಿಷದ ದರ್ಶನವೇ ಆಗಿದ್ದರೂ ಭಾಗವತ ಸಂಪ್ರದಾಯದ ಛಾಯೆ ಅಲ್ಲಲ್ಲಿ ಕಂಡುಬರುತ್ತದೆಂಬುದನ್ನು ತಿಳಿಯಬೇಕು. ಉದಾಹರಣೆಗೆ,

**ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ।**
**ಪ್ರದ್ಯುಮ್ನಾಯ ನಮಸ್ತುಭ್ಯಮನಿರುದ್ಧಾಯ ತೇ ನಮಃ॥**
**(೫–೧೮–೫೮)**

ಈ ಶ್ಲೋಕದಲ್ಲಿ ಚತುರ್ವ್ಯೂಹದ ಕಲ್ಪನೆ ಸ್ಪಷ್ಟವಾಗಿದೆ. ಆದರೆ ಈ ವಾಸುದೇವಾದಿಮೂರ್ತಿಗಳು ಒಂದೇ ಪರತತ್ತ್ವದ ವಿಭಿನ್ನ ರೂಪಗಳೆಂದು ವಿಷ್ಣುಪುರಾಣವು ಪ್ರತಿಪಾದಿಸುತ್ತದೆ. ಈ ಶ್ಲೋಕವನ್ನು ನೋಡಿ–

**ಭೂತಾತ್ಮಾ ಚೇಂದ್ರಿಯಾತ್ಮಾ ಚ ಪ್ರಧಾನಾತ್ಮಾ ತಥಾ ಭವಾನ್।**
**ಆತ್ಮಾ ಚ ಪರಮಾತ್ಮಾ ಚ ತ್ವಮೇಕಃ ಪಂಚಧಾ ಸ್ಥಿತಃ॥**
**(೫–೧೮–೫೦)**

ಸರ್ವಜ್ಞನೂ ಸರ್ವಶ್ರೇಷ್ಠನೂ ಆದ ಪರಮೇಶ್ವರನು ಪರಂಜ್ಯೋತಿಯ ಒಂದು ಅಂಶ–

**ಪರಂಜೋತಿರಚಿಂತ್ಯಂ ಯತ್ತದಂಶಃ ಪರಮೇಶ್ವರಃ॥**
**(೫–೭–೪೮)**

**ಸೋಽಪ್ಯಂಶಃ ಸರ್ವಭೂತಸ್ಯ ಮೈತ್ರೇಯ ಪರಮಾತ್ಮನಃ॥**
**(೬–೪–೩೬)**

ಬಲರಾಮನೂ ಸಹ ವಸ್ತುತಃ ಭಗವಂತನೇ ಆಗಿದ್ದಾನೆ. ಜಗದ್ ವ್ಯವಹಾರಪಾಲನೆಗಾಗಿ ಬಲರಾಮನೆಂದೂ ಶ್ರೀಕೃಷ್ಣನೆಂದೂ ಎರಡು ವ್ಯಕ್ತಿಗಳಾಗಿ ಭಗವಂತನು ಅವತರಿಸಿದ್ದಾನೆ ಎಂದು ವಿಷ್ಣುಪುರಾಣವು ಹೇಳುತ್ತದೆ–

**ಭವಾನಹಂ ಚ ವಿಶ್ವಾತ್ಮನ್ನೇಕಮೇವ ಚ ಕಾರಣಮ್।**
**ಜಗತೋಽಸ್ಯ ಜಗತ್ಯರ್ಥೇ ಭೇದೇನಾವಾಂ ವ್ಯವಸ್ಥಿತೌ॥**
**(೫–೯–೩೨)**

ದೇವತೆಗಳೂ ಸಹ ಅರ್ಚಿಸುವುದು ಪರಬ್ರಹ್ಮದ ಸಗುಣ ರೂಪವನ್ನು, ಆತನ ಪರತತ್ತ್ವವನ್ನು ಯಾವನೂ ಅರಿಯನು–

**ಭವತೋ ಯತ್ಪರಂ ರೂಪಂ ತನ್ನ ಜಾನಾತಿ ಕಶ್ಚನ।**
**ಅವತಾರೇಷು ಯದ್ರೂಪಂ ತದರ್ಚಂತಿ ದಿವೌಕಸಃ॥**
**(೪–೪–೧೭)**

**ಬ್ರಹ್ಮವಿಷ್ಣುಶಿವಾ ಬ್ರಹ್ಮನ್ ಪ್ರಧಾನಾ ಬ್ರಹ್ಮಶಕ್ತಯಃ॥**
**(೧–೨೨–೫೮)**

ಇತ್ಯಾದಿ ವಾಕ್ಯಗಳಿಂದ ವಿಷ್ಣುವು ಪರಬ್ರಹ್ಮದ ಸಗುಣ ರೂಪವೆಂದೂ ಸ್ಫುಟವಾಗಿ ತಿಳಿದುಬರುತ್ತದೆ. ವಾಚಾಮಗೋಚರವಾದ ನಿರ್ಗುಣವೂ ನಿರ್ವಿಶೇಷವೂ ಆದ ಪರಬ್ರಹ್ಮವನ್ನು 'ಭಗವಾನ್' ಎಂದು ಕರೆಯುವುದೂ ಸಹ ಔಪಚಾರಿಕವಾಗಿ–ಎಂದು ತಿಳಿಸುವ ಈ ಶ್ಲೋಕ ಗಮನಾರ್ಹವಾದದ್ದು;

**ಅಶಬ್ದಗೋಚರಸ್ಯಾಪಿ ತಸ್ಯ ವೈ ಬ್ರಹ್ಮಣೋ ದ್ವಿಜ।**
**ಪೂಜಾಯಾಂ ಭಗವಚ್ಛಬ್ದಃ ಕ್ರಿಯತೇ ಹ್ಯುಪಚಾರತಃ॥**
**(೬–೫–೭೧)**

ಜ್ಞೇಯವಾದ ಪರಬ್ರಹ್ಮವು ನಾಮಜಾತ್ಯಾದಿರಹಿತವೂ ಸತ್ತಾಮಾತ್ರಾತ್ಮಕವೂ ಜ್ಞಾನಸ್ವರೂಪವೂ ಆದದ್ದು–

**ನ ಸಂತಿ ಯತ್ರ ಸರ್ವೇಶೇ ನಾಮಜಾತ್ಯಾದಿಕಲ್ಪನಾಃ।**
**ಸತ್ತಾಮಾತ್ರಾತ್ಮಕೇ ಜ್ಞೇಯೇ ಜ್ಞಾನಾತ್ಮನ್ಯಾತ್ಮನಃ ಪರೇ॥**
**(೬–೪–೩೭)**

## ಮೋಕ್ಷಸ್ವರೂಪ

ಆತ್ಯಂತಿಕ ಪ್ರಳಯವನ್ನು ಮೋಕ್ಷವೆಂದು ವಿಷ್ಣುಪುರಾಣವು ಹೇಳಿದೆ. ಆತ್ಯಂತಿಕ ಎಂದರೆ ಕಡೆಯದಾಗಿ–ಪುನರ್ಜನ್ಮವೇ ಇಲ್ಲದಂತೆ–ಪರಬ್ರಹ್ಮದಲ್ಲಿ ಪೂರ್ಣವಾಗಿ ಲಯಿಸುವುದು ಎಂದರ್ಥ. ನೀರಲ್ಲಿ ನೀರು ಸೇರಿದಂತೆ ಸೇರಿ ಹೋಗುವುದು. ಇನ್ನೊಂದು ವಸ್ತುವಿನಲ್ಲಿ ಭಿನ್ನವಾದ ಮತ್ತೊಂದು ವಸ್ತು ಸಂಪೂರ್ಣವಾಗಿ ಲಯಿಸುವುದು ಶಕ್ಯವಾದ್ದಲ್ಲ. ನೀರಿನೊಡನೆ ಇನ್ನೊಂದು ನೀರು ಸೇರಿದಾಗ ಮೊದಲಿದ್ದ ನೀರು ಪ್ರಮಾಣದಲ್ಲಿ ಹಿಗ್ಗುತ್ತದೆ. ಹಾಗೆ ಬ್ರಹ್ಮವಸ್ತು ಹಿಗ್ಗುವಂತಹುದಲ್ಲ. ಆದ್ದರಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಸಮ್ಯಗ್ದರ್ಶನವೇ ಮೋಕ್ಷವೆಂದು ಸಿದ್ಧವಾಗುತ್ತದೆ.

## ಸಾಧನಮಾರ್ಗ

ಮಾನವನ ಜನನ ಮರಣಗಳಿಗೆ ಆತನ ಪಾಪಪುಣ್ಯಗಳೇ ನಿಮಿತ್ತ. ಜನನವೆಂದರೆ

ಶರೀರಗ್ರಹಣವಷ್ಟೆ. ಶರೀರವು ಭೋಗಾಯತನ. ಪಾಪಪುಣ್ಯಗಳ ಫಲಾನುಭವವೇ ಭೊಗ. ಇವೆರಡರ ಸಂಬಂಧ ಕಳಚಿದಾಗ ಮೋಕ್ಷವು ಸ್ವತಃಸಿದ್ಧ–

**ಕ್ಷೀಣಾಧಿಕಾರಃ ಸ ಯದಾ ಪುಣ್ಯಪಾಪವಿವರ್ಜಿತಃ।**
**ತದಾ ಸ ಭಗವದ್‌ಧ್ಯಾನಾತ್ ಪರಂ ನಿರ್ವಾಣಮಾಪ್ತವಾನ್॥**
**(೧–೨೧–೩೪)**

ಎಂಬುದಾಗಿ ಪ್ರಹ್ಲಾದನು ಮೋಕ್ಷ ಹೊಂದಿದ ಪ್ರಕಾರವನ್ನು ವರ್ಣಿಸಲಾಗಿದೆ. ಅಂತೆಯೇ ಕೇಶಿಧ್ವಜನು ಜ್ಞಾನಿಯಾಗಿದ್ದರೂ ಸ್ವಕರ್ಮಕ್ಷಪಣೋನ್ಮುಖನಾಗಿ ಫಲಾಭಿಸಂಧಿಯಿಲ್ಲದೆ ಕರ್ಮ ವನ್ನಾಚರಿಸುತ್ತ ಆತ್ಯಂತಿಕಸಿದ್ಧಿಯನ್ನು ಪಡೆದಿದ್ದಾನೆ. 'ಭಗವದ್ ಧ್ಯಾನಾತ್' ಎಂದು ಮೇಲೆ ಹೇಳಿದೆಯಷ್ಟೆ. ಈ ಧ್ಯಾನಪ್ರಕಾರ ಹೇಗೆಂಬುದನ್ನು ಖಾಂಡಿಕ್ಯಜನಕ–ಕೇಶಿಧ್ವಜರ ಸಂವಾದದಲ್ಲಿ ಬಹುಸುಂದರವಾಗಿ ನಿರೂಪಿಸಲಾಗಿದೆ. ಆರನೆಯ ಅಂಶದ ಏಳನೆಯ ಅಧ್ಯಾಯದಲ್ಲಿ ಬರುವ ಕೇಶಿಧ್ವಜನ ಉಪದೇಶಸಾರ ಹೀಗಿದೆ:

"ವಿಷ್ಣುವಿನ ಪರಮಾರ್ಥಸ್ವರೂಪವು ಬ್ರಹ್ಮಸಂಜ್ಞಿತಜ್ಞಾನವಾಗಿದ್ದು, ಧ್ಯಾನಕ್ಕೆ ಸುಲಭವಾದ್ದಲ್ಲ. ಅದು–

**ಪ್ರತ್ಯಸ್ತಮಿತಭೇದಂ ಯತ್ ಸತ್ತಾಮಾತ್ರಮಗೋಚರಮ್।**
**ವಚಸಾಮಾತ್ಮಸಂವೇದ್ಯಂ ತಜ್ಜ್ಞಾನಂ ಬ್ರಹ್ಮಸಂಜ್ಞಿತಮ್॥**
**(೬–೭–೫೩)**

ಇದು ಶ್ರೇಷ್ಠವಾದ ವಿಷ್ಣುಶಕ್ತಿ. ಇದರ ಇನ್ನೊಂದು ಶಕ್ತಿ ಕ್ಷೇತ್ರಜ್ಞ (ಜೀವಾತ್ಮ) ಎನಿಸುತ್ತದೆ. ಮೂರನೆಯದು 'ಅವಿದ್ಯಾಶಕ್ತಿ'. ಈ ಅವಿದ್ಯಾಶಕ್ತಿಯಿಂದ ಕ್ಷೇತ್ರಜ್ಞಶಕ್ತಿಯು ಆವೃತವಾಗಿರುತ್ತದೆ. ಈ ಕ್ಷೇತ್ರಜ್ಞನು ಸರ್ವಭೂತಗಳಲ್ಲಿಯೂ ತಾರತಮ್ಯದಿಂದ ವ್ಯವಸ್ಥಿತನಾಗಿದ್ದಾನೆ. ಅಮೂರ್ತವೂ ಸತ್ಪದವಾಚ್ಯವೂ ಆದ ಸ್ವರೂಪವು ಸಿದ್ಧರಾದ ಯೋಗಿಗಳಿಗೆ ಮಾತ್ರ ಧ್ಯೇಯವಾಗಿದೆ. ಸಾಧಕನಾದವನು ಭಗವಂತನ ಮೂರ್ತರೂಪವನ್ನು ಮೊದಲು ಧ್ಯಾನಿಸುತ್ತಿರಬೇಕು. ಅದು ಅಷ್ಟಭುಜವುಳ್ಳ ಅಥವಾ ಚತುರ್ಭುಜವುಳ್ಳ ವಿಷ್ಣುವಿನ ಸುಂದರ ಮೂರ್ತಿಯಾಗಿರಬೇಕು. ಆ ಮೂರ್ತಿಯು ಶಂಖಚಕ್ರ ಗದಾದಿಗಳಿಂದ ಭೂಷಿತವಾಗಿರತಕ್ಕದ್ದು. ಇಂತಹ ಮೂರ್ತಿಯಲ್ಲಿ ಚಿತ್ತಧಾರಣೆಯು ದೃಢವಾದ ಮೇಲೆ ಶಂಖಚಕ್ರಗದಾದ್ಯಾಯುಧ ರಹಿತವೂ ಅಕ್ಷಸೂತ್ರ ಸಹಿತವೂ ಆದ ಮೂರ್ತಿಯನ್ನು ಧ್ಯಾನಿಸತಕ್ಕದ್ದು. ಅದರಲ್ಲಿ ಧಾರಣೆಯು ಮತ್ತೂ ದೃಢವಾದ ಮೇಲೆ ಸರ್ವಭೂಷಣರಹಿತವಾದ ಏಕಾವಯವನಾದ ಅಖಂಡಮೂರ್ತಿಯ ಧ್ಯಾನದಲ್ಲಿ ತೊಡಗಬೇಕು. ಅನಂತರ ಅವಯವರಹಿತವಾದ ಆತ್ಮಸ್ವರೂಪದಲ್ಲಿ ಮನಸ್ಸನ್ನು

ದೃಢಗೊಳಿಸಬೇಕು. ಕಲ್ಪನಾಹೀನವಾದ ಸ್ವರೂಪದಲ್ಲಿ ಮನಸ್ಸನ್ನು ಲಯಗೊಳಿಸುವುದು ಸಮಾಧಿ ಎನಿಸುತ್ತದೆ. ಈ ಸಮಾಧಿಸ್ಥಿತಿಯಲ್ಲಿ ಭಗವತ್ ಸ್ವರೂಪದ ಸಾಕ್ಷಾತ್ಕಾರವಾಗುತ್ತದೆ. ಆಗ ಈತನು ಕೃತಕೃತ್ಯನಾಗುತ್ತಾನೆ. ತದ್ಭಾವಭಾವವನ್ನು ಹೊಂದಿ ಪರಮಾತ್ಮನೊಡನೆ ಅಭಿನ್ನವಾಗಿ ನೆಲೆಸುವುದೇ ಮುಕ್ತಿ. ಪರಮಾತ್ಮನಿಗೂ ತನಗೂ ಭೇದವನ್ನು ತಿಳಿದುಕೊಂಡಿರುವುದು ಅಜ್ಞಾನಕೃತ. ಈ ಅಜ್ಞಾನ ನಷ್ಟವಾದ ಮೇಲೆ ಭೇದಜ್ಞಾನ ಉಳಿಯುವುದೇ ಇಲ್ಲ–

**ವಿಭೇದಜನಕೇऽಜ್ಞಾನೇ ನಾಶಮಾತ್ಯಂತಿಕಂ ಗತೇ।**
**ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ॥**

**(೬–೭–೯೬)**

ಲೋಕವ್ಯವಹಾರವು ಮಾತ್ರ 'ನಾನು, ನನ್ನದು' ಎಂಬ ಅವಿದ್ಯಾ ಮೂಲಕವಾದ ಭೇದಜ್ಞಾನದಿಂದ ನಡೆಯುತ್ತದೆ–

**ಅಹಂ ಮಮೇತ್ಯವಿದ್ಯೇಯಂ ವ್ಯವಹಾರಸ್ತಥಾನಯೋಃ।**
**ಪರಮಾರ್ಥಸ್ತ್ವಸಂಲೋಪೋ ಗೋಚರೇ ವಚಸಾಂ ನ ಯಃ॥**

**(೬–೭–೧೦೦)**

ಭಗವದ್ಭಕ್ತಿ, ನಿಷ್ಕಾಮಕರ್ಮ–ಇವೆರಡು ಜ್ಞಾನಕ್ಕೆ ಸಾಧನಗಳೆಂದು ವಿಷ್ಣುಪುರಾಣವು ಪ್ರತಿಪಾದಿಸುತ್ತದೆ.

# ೪. ಭಾಗವತದ ವೈಶಿಷ್ಟ್ಯ

**ಯಶೋದಾಯಾ ಭಾಗ್ಯಂ ಸಮುಪಚಿತಪುಣ್ಯಂ ವ್ರಜಸದಾಂ**
**ವಿಧಿಃ ಕಂಸಾದೀನಾಂ ನಿಧಿರನವಧಿರ್ವೇದವಚಸಾಮ್।**
**ಮತಿಃ ಕೌಂತೇಯಾನಾಂ ಗತಿರಮೃತದಾತ್ರೀ ಜನಿಭೃತಾಂ**
**ಮಹೋ ಮೇ ಹೃದ್ಯಾಸ್ತಾಂ ಕಿಮಪಿ ತಿರಯನ್ಮೋಹತಿಮಿರಮ್॥**

## ಭಾಗವತದ ವೈಶಿಷ್ಟ್ಯ

ಭಾಗವತವು ಅಷ್ಟಾದಶಮಹಾಪುರಾಣಗಳಲ್ಲಿ ಒಂದೆಂದು ಪ್ರಸಿದ್ಧವಾಗಿದೆ. 'ಭಗವಂತಮಧಿಕೃತ್ಯ ಕೃತೋ ಗ್ರಂಥಃ ಭಾಗವತಂ–ಭಗವಂತನಾದ ವಿಷ್ಣುವನ್ನು ಕುರಿತು ರಚಿತವಾದ ಗ್ರಂಥ ಭಾಗವತ' ಎಂದು ಭಾಗವತ ಶಬ್ದದ ವ್ಯುತ್ಪತ್ತಿ. ಇದನ್ನು ವಿಷ್ಣುಭಾಗವತ ಎಂದೂ ಕೆಲವರು ಹೇಳುತ್ತಾರೆ. ಏಕೆಂದರೆ, 'ದೇವೀಭಾಗವತ' ಎಂಬ ಇನ್ನೊಂದು ಪುರಾಣ ಉಂಟು. ಅದು ಭಗವತಿಯಾದ ದೇವಿಯನ್ನು ಕುರಿತು ರಚಿಸಿದ ಗ್ರಂಥ. ಇವೆರಡರಲ್ಲಿಯೂ ಹನ್ನೆರಡು ಸ್ಕಂಧಗಳಿದ್ದು ಎರಡರಲ್ಲಿಯೂ ಹದಿನೆಂಟುಸಾವಿರ ಶ್ಲೋಕಗಳಿವೆ. ಪುರಾಣಾಂತರಗಳಲ್ಲಿ ಹೇಳಿದ ಭಾಗವತದ ಲಕ್ಷಣ ಎರಡರಲ್ಲಿಯೂ ಇದೆ. ಭಾಷಾಶೈಲಿಯನ್ನು ಗಮನಿಸಿದರೆ ದೇವೀಭಾಗವತವೇ ಇತರ ಹದಿನೇಳು ಪುರಾಣಗಳಿಗೆ ಸಂವಾದಿಯಾಗಿದೆ. ಆದರೆ ಪದ್ಮಪುರಾಣ ಮತ್ತು ಸ್ಕಾಂದಪುರಾಣಗಳಲ್ಲಿ ಲಕ್ಷಿಸಿರುವ ಭಾಗವತವು ವಿಷ್ಣುಭಾಗವತವೇ.

ಈ ವಿವಾದ ಹೇಗಾದರೂ ಇರಲಿ. ಪ್ರಕೃತವಾದ ಈ ಭಾಗವತವು ವಿದ್ವನ್ಮಾನ್ಯವೂ ವಿದ್ವತ್‌ಪ್ರಿಯವೂ ಆಗಿದೆ. ವೈದಿಕಧರ್ಮದವರೆಲ್ಲರೂ ಇದನ್ನು ಆದರಿಸಿ ಪುರಸ್ಕರಿಸಿದ್ದಾರೆ. ಲೋಕಕಲ್ಯಾಣಕ್ಕಾಗಿ ಭಗವಂತನು ಎತ್ತಿದ ವಿವಿಧ ಅವತಾರದ ಕಥೆಗಳಿಂದಲೂ, ಆನುಷಂಗಿಕವಾದ ಇತರ ಕಥೆಗಳಿಂದಲೂ ರಸವತ್ತಾಗಿದೆ. ಇಲ್ಲಿ ಪ್ರತಿಪಾದಿತವಾದ ವೇದಾಂತತತ್ತ್ವಗಳು ಇಷ್ಟು ವ್ಯವಸ್ಥಿತವಾಗಿ ಉಳಿದ ಹದಿನೇಳು ಪುರಾಣಗಳಲ್ಲಿಯೂ ಬಂದಿಲ್ಲವೆನ್ನಬಹುದು. ಈ ಭಾಗವತವು ಪುರಾಣಗಳ ಶಿರೋಮಣಿ. ಇತಿಹಾಸಗಳೆನಿಸಿದ

ರಾಮಾಯಣ, ಮಹಾಭಾರತಗಳೊಡನೆ ಭಾಗವತವನ್ನು ಪ್ರವಚನಕ್ಕಾಗಿ ನಮ್ಮವರು ಆರಿಸಿಕೊಂಡಿದ್ದಾರೆ. ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆಗಳು ಪ್ರಸ್ಥಾನತ್ರಯುವಾಗಿರುವಂತೆ, ರಾಮಾಯಣ ಮಹಾಭಾರತ ಭಾಗವತಗಳು 'ಪ್ರವಚನತ್ರಯ'ವಾಗಿವೆ.

## ಭಾಗವತದ ರಚನೆ

ವ್ಯಾಸಮುನಿಗಳು ವೇದಾರ್ಥೋಪಬೃಂಹಿತವಾದ ಮಹಾಭಾರತವನ್ನು 'ಸ್ತ್ರೀಶೂದ್ರದ್ವಿಜಬಂಧು'ಗಳಿಗಾಗಿ ರಚಿಸಿದರು. ಭಗವದ್ಗೀತೆಯೇ ಮೊದಲಾದ ವಿಭಾಗಗಳಲ್ಲಿ ದಾರ್ಶನಿಕತತ್ತ್ವವನ್ನು ಸ್ಫುಟವಾಗಿ ಅಳವಡಿಸಿದರು. ಲೋಕಹಿತಕ್ಕಾಗಿ ಆ ಮಹಾಕಾರ್ಯವನ್ನು ಸಾಂಗವಾಗಿ ನೆರವೇರಿಸಿದರೂ ಅವರ ಮನಸ್ಸಿಗೆ ಶಾಂತಿಯು ದೊರಕದೆ ಸರಸ್ವತೀ ನದೀತೀರದಲ್ಲಿ ಪರಿತಪಿಸುತ್ತ ಕುಳಿತಿದ್ದರಂತೆ. ಅಲ್ಲಿಗೆ ನಾರದರು ಬರಲಾಗಿ ತಮ್ಮ ಮನಸ್ಸಿನ ಪರಿತಾಪವನ್ನು ಅವರಿಗೆ ಹೇಳಿದರೆಂದೂ ಆಗ ನಾರದರು "ಭಗವಂತನ ಮಹಿಮೆಯನ್ನು ನೀನು ಸಾಕಷ್ಟು ವರ್ಣಿಸಿಲ್ಲ. ಭಕ್ತಿಮಾರ್ಗದ ಶ್ರೇಷ್ಠತೆಯನ್ನು ವಿಶೇಷವಾಗಿ ನಿರೂಪಿಸಿಲ್ಲ. ಈ ಕೊರತೆಯನ್ನು ನೀಗಿಕೊಳ್ಳಲು ಇನ್ನೊಂದು ಗ್ರಂಥವನ್ನು ರಚಿಸಿದರೆ, ನಿನಗೆ ಈ ಬವಣೆ ತಪ್ಪಿ ಶಾಂತಿ ದೊರಕುವುದು" ಎಂದು ಹೇಳಿದರಂತೆ. ಆಗ ವ್ಯಾಸಮುನಿಗಳು ಈ ಭಾಗವತವನ್ನು ರಚಿಸಿದರು–ಎಂದು ತಿಳಿದುಬರುತ್ತದೆ (ಭಾಗವತ ಸ್ಕಂಧ ೧–ಅಧ್ಯಾಯ ೪–೫). ಅನಂತರ ವ್ಯಾಸರು ಇದನ್ನು ಶುಕಮುನಿಗಳಿಗೆ ಬೋಧಿಸಿದರು. ಶಾಪಗ್ರಸ್ತನಾದ ಪರೀಕ್ಷಿತರಾಜನು ವ್ರತಚರ್ಯೆಯಲ್ಲಿದ್ದಾಗ, ಶುಕಮುನಿಗಳು ಏಳು ದಿನಗಳವರೆಗೆ ಈ ಭಾಗವತವನ್ನು ಆತನಿಗೆ ಶ್ರವಣಮಾಡಿಸಿದರು. (ಭಾಗವತ ೧–೧೯).

ಪದ್ಮಪುರಾಣದಲ್ಲಿ ಇದರ ಮುಂದಿನ ಕಥೆ ಹೀಗಿದೆ: "ಪರೀಕ್ಷಿತನು ಭಾಗವತವನ್ನು ಶ್ರವಣಮಾಡಿದಮೇಲೆ, ಕಲಿಯುಗದಲ್ಲಿ ಇನ್ನೂರು ವರ್ಷಗಳು ಕಳೆಯಲಾಗಿ, ಗೋಕರ್ಣ ಎಂಬವನು ತನ್ನ ಸೋದರನಾಗಿದ್ದ ಧುಂಧಕಾರಿಗೆ ಇದನ್ನು ಹೇಳಿ, ಆತನಿಗೆ ಬಂದಿದ್ದ ಪ್ರೇತಜನ್ಮವನ್ನು ಹೋಗಲಾಡಿಸಿದನು. ಅನಂತರ ಮುವ್ವತ್ತು ವರ್ಷಗಳು ಕಳೆದ ಮೇಲೆ ಬ್ರಹ್ಮನ ಮಾನಸಪುತ್ರರಾದ ಸನತ್ಕುಮಾರಾದಿಗಳು ನಾರದರಿಗೆ ಭಾಗವತ ಕಥೆಯನ್ನು ಹೇಳಿದರು" (ಪದ್ಮಪುರಾಣ, ಉತ್ತರಖಂಡ).

ಪದ್ಮಪುರಾಣದಲ್ಲಿ ಈ ವಿಷಯವಾಗಿ ಹೇಳಿರುವ ಕಥೆ ಗಮನಾರ್ಹವಾದುದು. "ಭಕ್ತಿಯೆಂಬ ಸ್ತ್ರೀ ದ್ರಾವಿಡದೇಶದಲ್ಲಿ ಹುಟ್ಟಿ, ಕರ್ನಾಟಕ ದೇಶದಲ್ಲಿ ಬೆಳೆದು, ಮಹಾರಾಷ್ಟ್ರದಲ್ಲಿ ಕೆಲವೆಡೆ ಇದ್ದು, ಗುರ್ಜರದಲ್ಲಿ (ಗುಜರಾತ್) ಮುದುಕಿಯಾದಳಂತೆ! ಅವಳಿಗೆ ಜ್ಞಾನ,

ವೈರಾಗ್ಯ ಎಂಬ ಇಬ್ಬರು ಮಕ್ಕಳಿದ್ದರು. ಅವರನ್ನು ಕರೆದುಕೊಂಡು ವೃಂದಾವನಕ್ಕೆ ಹೊಗಲು ಅವಳಿಗೆ ಮತ್ತೆ ತಾರುಣ್ಯ ಬಂದಿತು. ಜ್ಞಾನ, ವೈರಾಗ್ಯ-ಎಂಬ ಮಕ್ಕಳು ಮಾತ್ರ ಮುದುಕರೂ ಬಲಹೀನರೂ ಆಗಿದ್ದುದರಿಂದ ಭಕ್ತಿಯು ಶೋಕಿಸುತ್ತ ಯಮುನಾ ತಟದಲ್ಲಿದ್ದಳು. ನಾರದರು ಅವಳ ಕಷ್ಟವನ್ನರಿತು ಅದರ ಪರಿಹಾರಕ್ಕಾಗಿ ಸನತ್ಕುಮಾರನನ್ನು ಕಂಡು ಭಕ್ತಿಯ ಪರಿಸ್ಥಿತಿಯನ್ನು ತಿಳಿಸಿದರು. ಆಗ ಸನತ್ಕುಮಾರರು ಗಂಗಾತೀರದಲ್ಲಿ ಭಾಗವತದ ಪ್ರವಚನ ಮಾಡಿದರು. ಭಕ್ತಿಯು ಪ್ರೇಮರೂಪಳಾಗಿ ಉಲ್ಲಾಸಗೊಂಡಳು. ಜ್ಞಾನ, ವೈರಾಗ್ಯ ಎಂಬ ಅವಳ ಮಕ್ಕಳು ಮತ್ತೆ ತಾರುಣ್ಯವನ್ನು ಪಡೆದರು."

ಈ ಕಥೆ ಚಮತ್ಕಾರಿಯಾದರೂ ಅರ್ಥವತ್ತಾಗಿದೆ. ಭಕ್ತಿ ಮಾರ್ಗದಿಂದಲೇ ಜ್ಞಾನ ವೈರಾಗ್ಯಗಳ ಉದ್ಗಮ. ಭಕ್ತಿಯಿಂದಲೇ ಅವು ಪೋಷಿತವಾಗಿ ದೃಢವಾಗಿ ನಿಲ್ಲಬಲ್ಲವು. ಭಾಗವತವು ಭಕ್ತಿ ರಸಪ್ರಧಾನವಾಗಿದ್ದು ಜ್ಞಾನವೈರಾಗ್ಯಗಳ ಕಡೆಗೆ ಕರೆದೊಯ್ಯುತ್ತದೆ- ಎಂಬುದು ಇಲ್ಲಿ ಸೂಚ್ಯ.

ಪದ್ಮಪುರಾಣದಲ್ಲಿ ಹೇಳಿದ ಕೆಲವು ಮಾತುಗಳನ್ನು ಇಲ್ಲಿ ಸ್ಮರಿಸಿಕೊಳ್ಳುವುದು ಉಚಿತವಾದೀತು.

**ವೇದೋಪನಿಷದಾಂ ಸಾರಾಜ್ಜಾತಾ ಭಾಗವತೀ ಕಥಾ।**
**ಅತ್ಯುತ್ತಮಾ ತತೋ ಭಾತಿ ಪೃಥಗ್ಭೂತಾ ಫಲಾಕೃತಿಃ॥**

"ವೇದೋಪನಿಷತ್ತುಗಳ ಸಾರದಿಂದ ಭಾಗವತ ಕಥೆ ಹುಟ್ಟಿದೆ. ಅವುಗಳಿಂದ ಬೇರೆಯಾಗಿ ತೋರಿದರೂ ಅವುಗಳ ಶ್ರೇಷ್ಠವಾದ ಹಣ್ಣಿನಂತೆ ಶೋಭಿಸುತ್ತಿದೆ"

**ನಿಗಮಕಲ್ಪತರೋರ್ಗಲಿತಂ ಫಲಂ**
**ಶುಕಮುಖಾದಮೃತದ್ರವಸಂಯುತಮ್।**
**ಪಿಬತ ಭಾಗವತಂ ರಸಮಾಲಯಂ**
**ಮುಹುರಹೋ ರಸಿಕಾ ಭುವಿ ಭಾವುಕಾಃ॥**

"ವೇದವೆಂಬ ಕಲ್ಪವೃಕ್ಷದಿಂದ ಭಾಗವತವೆಂಬ ಹಣ್ಣು ಕೆಳಗೆ ಉದುರಿದೆ. ಈ ಭಾಗವತವು ಶುಕಮಹರ್ಷಿಗಳ ಮುಖದಿಂದ ಬಂದುದು-ಗಿಳಿಯು ಕುಕ್ಕಿದುದರಿಂದ ಈ ಹಣ್ಣು ಕೆಳಗೆ ಬಿದ್ದಿದೆ. ಇದು ಅಮೃತದ್ರವದಿಂದ (ಮೋಕ್ಷವನ್ನೀಯುವ ಭಕ್ತಿರಸದಿಂದ) ತುಂಬಿದೆ-ಸಿಹಿಯಾದ ರಸದಿಂದ ತುಂಬಿದೆ. ಓ ರಸಿಕರಾದ ಭಾವುಕರೆ, ತೃಪ್ತಿಯಾಗುವವರೆಗೆ ಭೂಲೋಕದಲ್ಲಿಯೇ ಈ ಅಮೃತರಸವನ್ನು ಕುಡಿಯಿರಿ!"

**ಸ್ವರ್ಗೇ ಸತ್ಯೇ ಚ ಕೈಲಾಸೇ ವೈಕುಂಠೇ ನಾಸ್ತ್ಯಯಂ ರಸಃ।**
**ಅತಃ ಪಿಬಂತು ಸದ್ಭಾಗ್ಯಾ ಮಾ ಮಾ ಮುಂಚತ ಕರ್ಹಿಚಿತ್॥**

"ಈ ರಸವು ಸ್ವರ್ಗ, ಸತ್ಯಲೋಕ, ಕೈಲಾಸ, ವೈಕುಂಠಗಳಲ್ಲಿಯೂ ಇಲ್ಲ. ಆದ್ದರಿಂದ, ಭಾಗ್ಯಶಾಲಿಗಳೆ, ಇದನ್ನು ಕುಡಿಯಿರಿ. ಎಂದೆಂದಿಗೂ ಬಿಡಬೇಡಿರಿ!"

## ದಶಮಸ್ಕಂಧ

ಭಾಗವತದ ಕೇಂದ್ರಸ್ಥಾನ ದಶಮಸ್ಕಂಧ. ಶ್ರೀಕೃಷ್ಣಚರಿತೆಗೆ ವಿಸ್ತೃತವಾದ ಈ ಒಂದು ಸ್ಕಂಧವೇ ಮೀಸಲಾಗಿದೆ. ಇದರಲ್ಲಿ ಪೂರ್ವಾರ್ಧ, ಉತ್ತರಾರ್ಧ– ಎಂದು ಎರಡು ವಿಭಾಗಗಳಿದ್ದು ಪೂರ್ವಾರ್ಧದಲ್ಲಿ ಶ್ರೀಕೃಷ್ಣಾವತಾರ, ಬಾಲಲೀಲೆ, ಗೋಪಾಲನೆ, ಗೋಪಿಕಾಪ್ರಸಂಗ, ಕಂಸವಧೆ ಪ್ರಕರಣಗಳೂ ಅನಂತರ ಶ್ರೀಕೃಷ್ಣ ಬಲರಾಮರ ಉಪನಯನ, ವಿದ್ಯಾಭ್ಯಾಸಗಳ ವರ್ಣನೆಯೂ ಬರುತ್ತವೆ. ಆಮೇಲೆ ಶ್ರೀಕೃಷ್ಣನು ಅಕ್ರೂರನನ್ನು ಹಸ್ತಿನಾಪುರಕ್ಕೆ ಕಳಿಸಿ ಪಾಂಡವರ ಯೋಗಕ್ಷೇಮಗಳನ್ನು ತಿಳಿದುಕೊಳ್ಳುತ್ತಾನೆ. ಇಲ್ಲಿಗೆ ಪೂರ್ವಾರ್ಧದ ಕಥೆ ಸಮಾಪ್ತವಾಗುತ್ತದೆ.

ಉತ್ತರಾರ್ಧದಲ್ಲಿ ಕಾಲಯವನಾದಿಗಳಿಗೆ ಸಂಬಂಧಿಸಿದಂತೆ ಶ್ರೀಕೃಷ್ಣನ ಚರಿತೆ ವಿಸ್ತೃತವಾಗಿದೆ. ಮಹಾಭಾರತದಲ್ಲಿ ಬರುವ ಆತನ ಪಾತ್ರದ ವರ್ಣನೆ ಇಲ್ಲಿ ಪರಿಮಿತವಾಗಿದೆ.

ಭಾಗವತವು ಭಕ್ತಿರಸಪ್ರಧಾನವಾದ ಗ್ರಂಥ. ಆದ್ದರಿಂದಲೇ ಏನಾದರೊಂದು ನಿಮಿತ್ತದಿಂದ ಭಗವಂತನ ಸ್ತುತಿಗಳು ಬರುತ್ತಲೇ ಇರುತ್ತವೆ. ದೇವಕೀಗರ್ಭದಲ್ಲಿರುವಾಗಲೇ ಬ್ರಹ್ಮನಿಂದ, ಅವತರಿಸಿ ದೊಡನೆ ವಸುದೇವದೇವಕಿಯರಿಂದ, ಗೋಪಾಲನಾಸಂದರ್ಭದಲ್ಲಿ ಮತ್ತೆ ಬ್ರಹ್ಮನಿಂದ, ನಾಗಪತ್ನಿಯರಿಂದ, ಕಾಳಿಯ ಸರ್ಪನಿಂದ, ಇಂದ್ರನಿಂದ, ಗೋಪಿಕೆಯರಿಂದ–ಹೀಗೆ ಭಗವಂತನ ಸ್ತುತಿಗಳು ವಿಪುಲವಾಗಿವೆ. ಏನಾದರೊಂದು ಸಂದರ್ಭವನ್ನು ದೊರಕಿಸಿಕೊಂಡು ಶುಕಮುನಿಗಳು ಭಗವಂತನ ಸ್ತೋತ್ರದಲ್ಲಿ ತಲ್ಲೀನರಾಗುತ್ತಾರೆ. ಭಗವನ್ಮಹಿಮೆಯನ್ನು ಸ್ಮರಿಸಿಕೊಂಡು ಅವರು ರೋಮಾಂಚಿತರಾಗುತ್ತಾರೆ; ಮೈಮರೆಯುತ್ತಾರೆ. ಈ ಸ್ತೋತ್ರಗಳು ಬರಿಯ ಕೊಂಡಾಟವಲ್ಲ, ವೇದಾಂತತತ್ತ್ವ ಗರ್ಭಿತವಾದವು.

## ಭಾಗವತ ಒಂದು ಮಹಾಕಾವ್ಯ

ಭಾಗವತವು ಬರಿಯ ಸ್ತೋತ್ರಸಾಹಿತ್ಯವೆಂದಾಗಲಿ, ಕೇವಲ ತತ್ತ್ವಶಾಸ್ತ್ರವೆಂದಾಗಲಿ ಹೇಳಲಾಗದು. ಇದೊಂದು ಮಹಾಕಾವ್ಯವೂ ಆಗಿದೆ. ಮಹಾಕಾವ್ಯವೊಂದರಲ್ಲಿ ರಸಿಕರಾದ ಕಾವ್ಯಪ್ರಿಯರು ಯಾವ ರಸೋನ್ಮೇಷವನ್ನು ಭಾವಪೋಷಣೆಯನ್ನೂ ನಿರೀಕ್ಷಿಸುವರೋ ಅವುಗಳಿಗೆ ಇದರಲ್ಲಿ ಕೊರತೆಯಿಲ್ಲ. ದಶಮಸ್ಕಂಧವು–ವಿಶೇಷವಾಗಿ ಪೂರ್ವಾರ್ಧವು ಶೃಂಗಾರರಸಭೂಯಿಷ್ಠವಾಗಿದೆ. ವೀರ, ಕರುಣಾದಿರಸಗಳೂ ವಿವಿಧ ಭಾವಗಳೂ

ಪುಷ್ಟಿಗೊಂಡಿವೆ. ಪ್ರಕೃತಿವರ್ಣನೆ ರಮಣೀಯವಾಗಿದೆ. ಕುತೂಹಲಿಗಳು ನಿದರ್ಶನಕ್ಕಾಗಿ ಈ ಭಾಗಗಳನ್ನು ನೋಡಬಹುದು:

ಶ್ರೀಕೃಷ್ಣ-ಬಲರಾಮರ ಬಾಲಲೀಲೆ (ಅಧ್ಯಾ. ೮), ಯಶೋದೆಯು ಮೊಸರು ಕಡೆಯುವುದು (ಅಧ್ಯಾ. ೯-೩). ಮಳೆಗಾಲ ಶರತ್ಕಾಲಗಳ ವರ್ಣನೆ (ಅಧ್ಯಾ-೨೦), ರಾಸಕ್ರೀಡೆ (ಅಧ್ಯಾ. ೨೯), ಗೋಪೀಗೀತ (ಅಧ್ಯಾ. ೩೧), ಗೋಪಿಕಾಯುಗಲಗೀತ (ಅಧ್ಯಾ. ೩೫), ಮಧುರಾಪ್ರವೇಶ ಸಂದರ್ಭ (ಅಧ್ಯಾ. ೪೧-೪೨), ಭ್ರಮರಗೀತ (ಅಧ್ಯಾ. ೪೭)- ಇತ್ಯಾದಿ. ಇವು ಯಾವ ಮಹಾಕಾವ್ಯವನ್ನೂ ಮೀರಿಸಬಲ್ಲ ಮನೋಹರವಾದ ರಸಖಂಡಗಳು.

## ಕೃಷ್ಣಶಬ್ದದ ಪ್ರಾಚೀನತೆ

ದಶಮಸ್ಕಂಧದ ಕಥಾನಾಯಕನು ಶ್ರೀಕೃಷ್ಣ. ಕೃಷ್ಣನೆಂಬ ಹೆಸರು ಬಹಳ ಪ್ರಾಚೀನವಾದುದು. ಋಗ್ವೇದಸಂಹಿತೆಯ ಅಷ್ಟಮಮಂಡಲದ ೮೫, ೮೬, ೮೭ನೆಯ ಸೂಕ್ತಗಳಿಗೂ ದಶಮಮಂಡಲದ ೪೨, ೪೩, ೪೪ನೆಯ ಸೂಕ್ತಗಳಿಗೂ ಕೃಷ್ಣನೆಂಬ ಋಷಿ ದ್ರಷ್ಟಾರನೆಂದು ಉಕ್ತವಾಗಿದೆ. ಈ ಕೃಷ್ಣಋಷಿ ಭಾಗವತದ ಶ್ರೀಕೃಷ್ಣನಾಗಿರಲಾರ. ಛಾಂದೋಗ್ಯೋಪನಿಷತ್ತಿನಲ್ಲಿ "ಏತದ್ ಘೋರ ಆಂಗಿರಸಃ ಕೃಷ್ಣಾಯ ದೇವಕೀಪುತ್ರಾಯ ಉಕ್ತ್ವಾ ಉವಾಚ, ಅಪಿಪಾಸ ಏವ ಸ ಬಭೂವ" (೩-೧೭-೬) ಎಂದಿದೆ. ಆಂಗಿರಸಗೋತ್ರದವನಾದ ಘೋರನೆಂಬ ಆಚಾರ್ಯನು ತನ್ನ ಶಿಷ್ಯನಾದ ದೇವಕೀಪುತ್ರ ಕೃಷ್ಣನಿಗೆ ಯಜ್ಞದರ್ಶನವನ್ನು ಬೋಧಿಸಿದನೆಂದು ಇದರಿಂದ ಗೊತ್ತಾಗುತ್ತದೆ. ಆದರೆ ಘೋರ ಆಂಗಿರಸನು ಶ್ರೀಕೃಷ್ಣನ ಗುರುವೆಂದು ಇನ್ನೆಲ್ಲಿಯೂ ಹೇಳಿಲ್ಲ. ಭಾಗವತ, ವಿಷ್ಣುಪುರಾಣಗಳ ಪ್ರಕಾರ ಸಾಂದೀಪನಿ ಶ್ರೀಕೃಷ್ಣನ ಗುರು. ಇನ್ನು ಗೋಪಾಲತಾಪನೀ ಮೊದಲಾದ ಕೆಲವು ಉಪನಿಷತ್ತುಗಳಲ್ಲಿ ಕೃಷ್ಣನ ಹೆಸರಿದೆ. ಗೋಪಿಯರ ವರ್ಣನೆಯೂ ಇದೆ. ಈ ಉಪನಿಷತ್ತುಗಳು ಪ್ರಾಚೀನವಲ್ಲವೆಂದು ಪರಿಶೋಧಕರ ಅಭಿಪ್ರಾಯವಿದೆ.

ಪ್ರಸಿದ್ಧ ಸಂಸ್ಕೃತ ವೈಯಾಕರಣನಾದ ಪಾಣಿನಿಗಿಂತ (ಕ್ರಿ.ಪೂ. ೭೦೦) ಮೊದಲೇ ಕೃಷ್ಣಭಕ್ತಿ ಪ್ರಚುರವಾಗಿತ್ತು. ಶ್ರೀಕೃಷ್ಣನ-ವಾಸುದೇವನ ಭಕ್ತರು ವಾಸುದೇವಕರೆಂದು ಹೇಳಲ್ಪಡುತ್ತಿದ್ದರು. 'ವಾಸುದೇವಾರ್ಜುನಾಭ್ಯಾಂ ವುನ್' (ಅಷ್ಟಾ ೪-೩-೯೮) ಎಂಬ ಪಾಣಿನಿಸೂತ್ರದಿಂದ ಇದು ನಿಃಸಂದೇಹವಾಗಿ ಗೊತ್ತಾಗುತ್ತದೆ.

ಈಗ ಸ್ವರ್ಗಸ್ಥರಾಗಿರುವ, ಆದರೆ ನಮ್ಮ ಹೃದಯದಲ್ಲಿ ಸ್ಥಿರವಾಗಿ ನೆಲೆಸಿರುವ, ಡಾ|| ಡಿ.ವಿ. ಗುಂಡಪ್ಪನವರು ಶ್ರೀಕೃಷ್ಣನ ವಿಷಯವಾಗಿ ಗಾಢವಾದ ಚಿಂತನೆಯನ್ನು

ನಡೆಸಿದ್ದರು. ತಮ್ಮ ಗ್ರಂಥವಾದ ಶ್ರೀಕೃಷ್ಣ ಪರೀಕ್ಷಣದಲ್ಲಿ ಅವರ ವಿಷಯಮಂಥನ ಸ್ಫುಟವಾಗಿದೆ. ಆ ಗ್ರಂಥದಿಂದ ಕೆಲವು ಮಾತುಗಳನ್ನು ಇಲ್ಲಿ ಉದ್ಧರಿಸಿದೆ:

"ಶ್ರೀಕೃಷ್ಣಚರಿತ್ರೆ"ಯನ್ನು ನಾಲ್ಕು ಖಂಡಗಳಾಗಿ ನೋಡಬಹುದು: (೧) ಬಾಲ್ಯ, (೨) ಗೋಪೀವಿಲಾಸ, (೩) ರಾಜಕೀಯ, (೪) ಪರತತ್ತ್ವಬೋಧೆ.

ಮೊದಲನೆಯದು ಬಾಲ್ಯ. ಲೋಕದಲ್ಲಿ ನಾವು ಕಾಣುವ ಎಲ್ಲ ಬಾಲಕರ ದಿನದಿನದ ಜೀವನದಲ್ಲಿ ಕಾಣುವಂತೆ ಕೃಷ್ಣಬಾಲಕನ ಜೀವಿತದಲ್ಲಿಯೂ ಅನೇಕ ಲೀಲಾವಿನೋದಗಳನ್ನು ಕಾಣುತ್ತೇವೆ. ಬೆಣ್ಣೆ ಕದಿಯೋಣ, ಹಾಲು ಕದಿಯೋಣ, ಪ್ರಸಂಗದಲ್ಲಿ ಅವು ಉತ್ಪ್ರೇಕ್ಷೆಯ ರೂಪದಲ್ಲಿ ಕಾಣುತ್ತವೆ. ಕವಿ ತನ್ನ ವಾಚಕರ ಮನಸ್ಸಿನಲ್ಲಿ ಒಂದು ವಿಶದವೂ ಪರಿಪುಷ್ಟವೂ ಆದ ಚಿತ್ರವನ್ನು ನಿರ್ಮಿಸುವುದಕ್ಕಾಗಿ ವಸ್ತುವನ್ನು ದೊಡ್ಡ ಆಕಾರದಲ್ಲಿ ಚಿತ್ರಿಸುತ್ತಾನೆ. ಸಣ್ಣದನ್ನು ದೊಡ್ಡದಾಗಿ ಮಾಡಿ ತೋರಿಸುವುದು ಕಾವ್ಯಪ್ರವೃತ್ತಿಯಲ್ಲಿ ಒಂದು ನೈಜವಾಗಿ ನಡೆಯುವ ವ್ಯಾಪಾರ. ಚರಿತ್ರೆಯಲ್ಲಿ, ನ್ಯಾಯಸ್ಥಾನದಲ್ಲಿ, ಬ್ಯಾಂಕುಗಳಲ್ಲಿ ಹೇಳುವ ಸಂಗತಿಗಳನ್ನು ಅಳತೆಮಾಡಿ ಹೆಚ್ಚು ಕಡಮೆಗಳಿಲ್ಲದಂತೆ ಹೇಳಬೇಕು. ಕಾವ್ಯದಲ್ಲಿ ಮುಖ್ಯವಾದದ್ದು ಅಂಕಿ-ಅಳತೆಗಳಲ್ಲ. ವಸ್ತುವಿನ ಸ್ವರೂಪವು ವಾಚಕನ ಮನಸ್ಸಿನಲ್ಲಿ ಸ್ಫುಟವಾಗಬೇಕು. ಈ ಉದ್ದೇಶದಿಂದ ಕವಿಯ ಮಾತು ಭೂತಗನ್ನಡಿಯಾಗುತ್ತದೆ. ಸಾಸಿವೆಯ ಕಾಳು ಕುಂಬಳಕಾಯಾಗುತ್ತದೆ. ಕಾವ್ಯವನ್ನು ಅದು ಕಾವ್ಯವೆಂದು ನೆನಪಿಟ್ಟುಕೊಂಡು ಓದುವವರು ಕವಿಯ ಉತ್ಪ್ರೇಕ್ಷೆಗಳನ್ನು ತಪ್ಪೆಣಿಸರು. ವಾಚಕನ ಮನಸ್ಸಿನಲ್ಲಿ ಒಂದು ಮಹದದ್ಭುತದ ಭಾವನೆ ಉಂಟಾಗಬೇಕಾದದ್ದು ಕಾವ್ಯಕರ್ಮದ ಸಾರ್ಥಕ್ಯಕ್ಕೆ ಅವಶ್ಯ. ಆದ್ದರಿಂದ ಕೃಷ್ಣನ ಬಾಲ್ಯದ ವರ್ಣನೆಗಳನ್ನು ನಾವು ಹೆಚ್ಚಾಗಿ ಪರೀಕ್ಷಿಸಬೇಕಾಗಿಲ್ಲ" (ಪುಟ. ೩೨-೩೩).

ಇನ್ನು ಗೋಪೀವಿಲಾಸದ ವಿಷಯವಾಗಿ ಶ್ರೀ ಡಿ.ವಿ.ಜಿ.ಯವರ ತೀರ್ಮಾನ ಇದು:

1. ಶ್ರೀಕೃಷ್ಣನು ಕಾಮುಕನಲ್ಲ, ಜಾರನಲ್ಲ.
2. ಕಾಮಾರ್ತರಾಗಿ ಬಂದವರಿಗೆ ಆತ ಆಶ್ರಯಕೊಟ್ಟ.
3. ಅವರ ರೋಗಕ್ಕೆ ಆತ ಚಿಕಿತ್ಸೆ ನಡೆಸಿದ.
4. ಅದು ಸಾಮೋಪಾಯದ ಚಿಕಿತ್ಸೆ, ದಂಡೋಪಾಯದ್ದಲ್ಲ. ಅದು ಮಕ್ಕಳಲ್ಲಿ ವಾತ್ಸಲ್ಯವುಳ್ಳ ಉಪಾಧ್ಯಾಯನ ಶಿಕ್ಷಣನೀತಿ.
5. ಆತನ ಉಪಾಯ ಫಲಿಸಿತು. ಆತನನ್ನು ಮರೆಹೊಕ್ಕವರು ವಿಹಿತ ಮಾರ್ಗಕ್ಕೆ ಹಿಂದಿರುಗಿದರು.

6. ಗೋಪಿಯರು ವ್ಯಭಿಚಾರಿಣಿಯರಲ್ಲ; ವೇಶ್ಯೆಯರಲ್ಲ.
7. ಅವರು ತಮ್ಮ ತಮ್ಮ ಪತಿಗಳ ಹೊರತು ಬೇರೆ ಅನುರಕ್ತರಾಗಿದ್ದದ್ದು ಕೃಷ್ಣನೊಬ್ಬನಲ್ಲಿ ಮಾತ್ರ
8. ಅದು ಆತನು ಪರಮಾತ್ಮ ಸ್ವರೂಪನೆಂದು; ಪರಮೇಶ್ವರ ಪ್ರತೀಕವೆಂದು.
9. ದ್ರೌಪದಿಗೆ ಪತಿಪಂಚಕದಂತೆ ಗೋಪಿಯರಿಗೆ ಪತಿದ್ವಯ. ಕೃಷ್ಣನು ದೈವಾಂಶಪತಿ; ಗೋಪಾಲನು ಮಾನುಷಪತಿ.
10. ಗೋಪರಿಗೆ ತಮ್ಮ ಹೆಂಡಂದಿರು ತಮ್ಮಿಂದ ಅಗಲಿದ್ದರೆಂದೆನಿಸಲಿಲ್ಲ.
11. ಲೈಂಗಿಕಚಾಪಲ್ಯವು ಮನುಷ್ಯ ಸಾಮಾನ್ಯಲಕ್ಷಣ. ಅದಕ್ಕೆ ಸ್ತ್ರೀ ಪುರುಷ ಭೇದವಿಲ್ಲ. ಕೆಲವರಲ್ಲಿ ಅದು ಗೂಢವಾಗಿರುತ್ತದೆ; ಇನ್ನು ಕೆಲವರಲ್ಲಿ ಪ್ರಕಟಗೊಳ್ಳುತ್ತದೆ. ಯಾರು ಅದನ್ನು ಪ್ರಕಟಿಸರೋ ಅವರಿಂದ ಇತರರು ಕೆರಳುವುದಾಗದು. ಯಾರು ಆ ಚಪಲವನ್ನು ತಡೆಯಲಶಕ್ತರೋ ಅವರಲ್ಲಿ ಅದು ವ್ಯಾಧಿ; ಚಿಕಿತ್ಸೆಯನ್ನು ಬೇಡುತ್ತದೆ.
12. ಆದ್ದರಿಂದ ಕೃಷ್ಣನಿಗೆ ಬಂದಿರುವ "ಜಾರಚೋರಶಿಖಾಮಣಿ" ಎಂಬ ಬಿರುದು ಕವಿಗಳೂ ಹರಿಕಥಾಕಾರರೂ ಹೊರಿಸಿರುವ ಅಪವಾದ. ಅದು ಹಾಸ್ಯಗರ್ಭಿತವಾದ ಉತ್ಪ್ರೇಕ್ಷೆ; ಅದು ಸತ್ಯವನ್ನು ಮುಚ್ಚಿಟ್ಟು ಅಸತ್ಯವನ್ನು ತೋರಿಸುವಷ್ಟು ವಿಪರೀತವಾಗಿದೆ" (ಪುಟ. 35–36).

ಮುಂದೆ ಇವೆಲ್ಲವನ್ನೂ ಶ್ರೀ ಡಿ.ವಿ.ಜಿ. ಯವರು ಆಧಾರಗಳನ್ನಿತ್ತು ವಿಶದವಾಗಿ ವಿಶ್ಲೇಷಿಸಿದ್ದಾರೆ. "ಗೋಪಿಯರಿಗೆ ಕಾಮವ್ಯಾಧಿ ಇತ್ತು. ಬೇರೆ ಚಿಕಿತ್ಸೆಗೆ ಅದು ಜಗ್ಗುತ್ತಿರಲಿಲ್ಲ. ಆದ್ದರಿಂದ ತಕ್ಕ ಚಿಕಿತ್ಸೆಯನ್ನು ನೀಡಿ ಅವರ್ನು ಸನ್ಮಾರ್ಗಕ್ಕೆ ಹತ್ತಿಸಿದ ಮಹಾವೈದ್ಯ ಶ್ರೀಕೃಷ್ಣ" ಎಂಬುದು ಅವರ ನಿಲುವು. ಜೊತೆಗೆ ಒಂದು ಎಚ್ಚರಿಕೆಯನ್ನೂ ನೀಡಿದ್ದಾರೆ. ಈ ಮಾರ್ಗವು ವಿಶೇಷ ಪುರುಷರ ವಿಶೇಷ ಧರ್ಮವೆಂದೂ, ಜಿತೇಂದ್ರಿಯರೂ ಸರ್ವಕಾಮನಾವರ್ಜಿತರೂ ಲೋಕಕಲ್ಯಾಣೈಕ ದೃಷ್ಟಿಯುಳ್ಳವರೂ ಆದ ಶ್ರೀಕೃಷ್ಣನಂಥ 'ಈಶ್ವರರು' ಕೈಗೊಳ್ಳಬಹುದಾದ್ದೇ ಹೊರತು ಸಾಮಾನ್ಯರು ಈ ದಾರಿ ಹಿಡಿದರೆ ಅವರ ಸರ್ವನಾಶವಾಗುವುದೆಂದು ಎಚ್ಚರಿಸಿದ್ದಾರೆ.

ಭಾಗವತ, ವಿಷ್ಣುಪುರಾಣ–ಮೊದಲಾದ ಗ್ರಂಥಗಳನ್ನು ಪರಿಶೀಲಿಸಿದರೆ ಮೇಲ್ಕಂಡ ಅಭಿಪ್ರಾಯಕ್ಕೆ ಸಾಕಷ್ಟು ಪುರಸ್ಕಾರ ದೊರೆಯುತ್ತದೆ.

ಶ್ರೀಕೃಷ್ಣನ ರಾಜಕೀಯಸಿದ್ಧಾಂತ ಮತ್ತು ಪರತತ್ತ್ವಬೋಧೆಗಳ ಪರಿಶೀಲನೆಗೆ ಮಹಾಭಾರತವೂ ಭಾಗವತದ ಏಕಾದಶಸ್ಕಂಧವೂ ಸರಿಯಾದ ಸ್ಥಳ.

# ೫. ಭಾಗವತದ ತತ್ತ್ವವಿಚಾರ

## ಕಾವ್ಯಸಂಹಿತೆ

ಪದ್ಮಪುರಾಣದಲ್ಲಿ ಭಾಗವತದ ಮಾಹಾತ್ಮ್ಯವನ್ನು ವರ್ಣಿಸುವಾಗ

**"ಪಿಬತ ಭಾಗವತಂ ರಸಮಾಲಯಂ।**
**ಮುಹುರಹೋ ರಸಿಕಾ ಭುವಿ ಭಾವುಕಾಃ"**

ಎಂದಿರುವ ನುಡಿ ಅರ್ಥವತ್ತಾದದ್ದು. ಅದರಲ್ಲಿಯೂ ದಶಮಸ್ಕಂಧವು ರಸಭಾವಪುಷ್ಟಿಯುಳ್ಳ ಕಾವ್ಯಸಂಹಿತೆಯಾಗಿದೆ. ಪೂರ್ವಾರ್ಧದ ನಿವೇದನೆಯಲ್ಲಿ ಇದಕ್ಕೆ ಕೆಲವು ನಿದರ್ಶನಗಳನ್ನು ಕೊಟ್ಟಿದ್ದೇನೆ. ಉತ್ತರಾರ್ಧದಲ್ಲಿಯೂ ರುಕ್ಮಿಣೀಪರಿಣಯಪ್ರಸಂಗ (ಅಧ್ಯಾ. ೫೩, ೫೪), ಶ್ರೀಕೃಷ್ಣರುಕ್ಮಿಣೀಪ್ರಣಯಸಂವಾದ (೬೦), ಸುದಾಮೋಪಾಖ್ಯಾನ (೮೦–೮೧), ಕುರುಕ್ಷೇತ್ರದಲ್ಲಿ ನಂದಯಾದ ವಾದಿಗಳ ಸಮಾಗಮ (೮೨), ಸುಭದ್ರಾಹರಣ (೮೬)– ಇವು ರಸಗಟ್ಟಿಗಳು. ಶೃಂಗಾರ, ಹಾಸ್ಯ, ವಾತ್ಸಲ್ಯಾದಿಕೋಮಲಭಾವಗಳ ಅಭಿವ್ಯಕ್ತಿ ಇಲ್ಲಿ ಬಹುಸುಂದರವಾಗಿ ಮೂಡಿದೆ. ಈ ಸಂದರ್ಭಗಳು ಯಾವ ಮಹಾಕಾವ್ಯವನ್ನಾದರೂ ಸರಿಗಟ್ಟಬಲ್ಲವು; ಮೀರಬಲ್ಲವು.

## ಶಾಸ್ತ್ರಬೋಧೆ

ಸ್ತುತಿರೂಪವಾಗಿಯೋ ಉಪದೇಶರೂಪವಾಗಿಯೋ ಗಹನವಾದ ತತ್ತ್ವ ಶಾಸ್ತ್ರವನ್ನು ವಿವೇಚಿಸುವುದು ಭಾಗವತದ ಒಂದು ವಿಶೇಷ. ಇದಕ್ಕಾಗಿ ಬೇಕೆಂದೇ ಹಲವಾರು ಸಂದರ್ಭಗಳನ್ನು ಕಲ್ಪಿಸಿಕೊಳ್ಳಲಾಗುತ್ತಿದೆ. ಇವು ಭಾಗವತದಲ್ಲಿ ಹಾಸುಹೊಕ್ಕಾಗಿ ಬರುತ್ತವೆ. ದಾರ್ಶನಿಕ ವಿಷಯಗಳನ್ನು ಚಿತ್ರಿಸುವುದಕ್ಕೆ ಭಗವಂತನ ಕಥೆ ಒಂದು ಶುಭ್ರವಾದ ಭಿತ್ತಿ. ಇದರ ಮೇಲೆ ಯಥೇಚ್ಛವಾಗಿ ಅಧ್ಯಾತ್ಮ ವಿಷಯಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಇದರಲ್ಲಿ ಪ್ರತಿಪಾದ್ಯವಾದ ಸಿದ್ಧಾಂತವಾದರೂ ಯಾವುದು? ದ್ವೈತವೆ, ಅದ್ವೈತವೆ, ವಿಶಿಷ್ಟಾದ್ವೈತವೆ? ಅಥವಾ ಇನ್ನೊಂದು ದರ್ಶನ ವಿಶೇಷವೆ? ಎಲ್ಲ ಮತದವರೂ ತಮ್ಮ ತಮ್ಮ ದರ್ಶನಗಳಿಗೆ ಅನುಗುಣವಾಗಿ ಭಾಗವತಕ್ಕೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಪಾಂಚರಾತ್ರಾಗಮವನ್ನನುಸರಿಸಿ ಭಾಗವತದರ್ಶನ ಎಂಬ ಇನ್ನೊಂದು ದರ್ಶನಪ್ರಕಾರವನ್ನೂ ಆಧುನಿಕ ವಿದ್ವಾಂಸರು ಪ್ರತಿಪಾದಿಸಿದ್ದಾರೆ. ಭಾಷೆಯನ್ನು ಹಿಸುಕಿ ತಮಗೆ ಬೇಕಾದ ಅರ್ಥವನ್ನು ಹೊರಡಿಸುವ ಸಾಮರ್ಥ್ಯ ವಿದ್ವಾಂಸರಿಗಿದೆ. ಮಹಾದಾರ್ಶನಿಕನೂ ಶಂಕರಾಚಾರ್ಯರಿಗಿಂತ ಪ್ರಾಚೀನನೂ ಆದ ಭರ್ತೃಹರಿಯು ವೇದಾರ್ಥದ ವಿಷಯವಾಗಿ ಹೇಳುತ್ತಾನೆ–

**ತಸ್ಯಾರ್ಥವಾದರೂಪಾಣಿ ನಿಃಶ್ರಿತಾಃ ಸ್ವವಿಕಲ್ಪಜಾಃ।**
**ಏಕತ್ವಿನಾಂ ದ್ವೈತಿನಾಂ ಚ ಪ್ರವಾದಾ ಬಹುಧಾ ಮತಾಃ॥**
**–ವಾಕ್ಯಪದೀಯ, ಬ್ರಹ್ಮಕಾಂಡ, ಶ್ಲೋ. ೮**

"ವೇದದ ಅರ್ಥವಾದರೂಪವಾದ ಉಕ್ತಿಗಳನ್ನಾಶ್ರಯಿಸಿ ಅದ್ವೈತಿಗಳೂ ದ್ವೈತಿಗಳೂ ತಮ್ಮ ತಮ್ಮ ಬುದ್ಧಿಭೇದಗಳಿಂದ ನಾನಾವಿಧವಾದ ಹೇಳಿಕೆಗಳನ್ನು ಮಂಡಿಸಿದ್ದಾರೆ"

ಅನಂತರ 'ಸತ್ಯಾ ವಿಶುದ್ಧಿಸ್ತತ್ರೋಕ್ತಾ...' ಎಂದು ತನ್ನ ಸಿದ್ಧಾಂತವನ್ನು ನಿರೂಪಿಸಿದ್ದಾರೆ. ಭರ್ತೃಹರಿ ಅದ್ವೈತಿ. ಶಬ್ದಬ್ರಹ್ಮವಾದಿ. ಸತ್ಯದ ಜಿಜ್ಞಾಸುಗಳು ದಶಮಸ್ಕಂಧದ ಈ ಸೂಕ್ತಿಗಳನ್ನು ಮತ್ತೊಮ್ಮೆ ಪರಿಶೀಲಿಸಬೇಕು.

**೧. ಏವಂ ಸ್ವಮಾಯಾರಚಿತೇಷ್ವಸೌ ಪುಮಾನ್**
**ಗುಣೇಷು ರಾಗಾನುಗತೋ ವಿಮುಹ್ಯತಿ॥ ೧–೪೩**

**೨. ಭವೋ ನಿರೋಧಃ ಸ್ಥಿತಿರಪ್ಯವಿದ್ಯಯಾ**
**ಕೃತಾ ಯತಸ್ತ್ವಯ್ಯಭಯಾಶ್ರಯಾತ್ಮನಿ॥ ೨–೩೯**

**೩. ತದನು ತ್ವಂ ಹ್ಯಪ್ರವಿಷ್ಟಃ ಪ್ರವಿಷ್ಟ ಇವ ಭಾವ್ಯಸೇ॥ ೩–೧೪**

**೪. ರೂಪಂ ಯತ್ತತ್ಪ್ರಾಹುರವ್ಯಕ್ತಮಾದ್ಯಂ**
**ಬ್ರಹ್ಮ ಜ್ಯೋತಿರ್ನಿರ್ಗುಣಂ ನಿರ್ವಿಕಾರಮ್।**
**ಸತ್ತಾಮಾತ್ರಂ ನಿರ್ವಿಶೇಷಂ ನಿರೀಹಂ**
**ಸ ತ್ವಂ ಸಾಕ್ಷಾತ್ ವಿಷ್ಣುರಧ್ಯಾತ್ಮದೀಪಃ॥ ೩–೨೪**

**೫. ಏಕ ಏವ ಪರೋ ಹ್ಯಾತ್ಮಾ ಸರ್ವೇಷಾಮಪಿ ದೇಹಿನಾಂ।**
**ನಾನೇವ ಗೃಹ್ಯತೇ ಮೂಢೈರ್ಯಥಾ ಜ್ಯೋತಿರ್ಯಥಾ ನಭಃ॥**
**೫೪–೪೪**

೬. ಯಥಾ ಶಯಾನ ಆತ್ಮಾನಂ ವಿಷಯಾನ್ ಫಲಮೇವ ಚ।
ಅನುಭುಂಕ್ತೇऽಪ್ಯಸತ್ಯರ್ಥೇ ತಥಾಪ್ನೋತ್ಯಬುಧೋ ಭವಮ್॥
೫೪-೪೮

ಇತ್ಯಾದಿ.

## ಶ್ರೀರಾಮ-ಶ್ರೀಕೃಷ್ಣ

ತ್ರೇತಾಯುಗದಲ್ಲಿ ಶ್ರೀರಾಮನಾಗಿಯೂ ದ್ವಾಪರಯುಗದಲ್ಲಿ ಶ್ರೀಕೃಷ್ಣನಾಗಿಯೂ ಮಹಾವಿಷ್ಣು ಅವತರಿಸಿದ. ಎರಡು ಅವತಾರಗಳೂ ದುಷ್ಟ ದಮನಕ್ಕಾಗಿ, ಧರ್ಮರಕ್ಷಣೆಗಾಗಿ, ಶ್ರೀರಾಮನು ಒಬ್ಬ ಮಾನವನಂತೆ ಆಚರಿಸಿದ. ಸಾಧಾರಣಮನುಷ್ಯನೊಬ್ಬನು ಲೋಕದಲ್ಲಿ ಒಳಗಾಗಬಹುದಾದ ಕಷ್ಟಕೋಟಲೆಗಳಿಗೆ ಒಳಗಾದ. ಹಲವಾರು ಸಮಸ್ಯೆಗಳು ಅವನನ್ನು ಕಾಡಿದವು. ಎಲ್ಲವನ್ನೂ ಲೋಕೋತ್ತರ ಧೈರ್ಯದಿಂದ ಎದುರಿಸಿ, ಜಯಗಳಿಸಿ ಮಹಾತ್ಮನೆಂದೂ ಪುರುಷೋತ್ತಮನೆಂದೂ ಶ್ರೀರಾಮನು ವಿಖ್ಯಾತನಾದನು. ಬ್ರಹ್ಮಾದಿಗಳು ಅವನನ್ನು ನೀನೇ ಪರಮಾತ್ಮನೆಂದು ಸ್ತುತಿಸಿದಾಗ "ಇದೇನು ಹೀಗೆ ಹೇಳುತ್ತೀರಿ? ನಾನು ರಾಮನೆಂಬ ಹೆಸರಿನ ಒಬ್ಬ ಮನುಷ್ಯ. ದಶರಥನ ಮಗ (ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ-ಯುದ್ಧಕಾಂಡ ೧೨೦-೧೧)" ಎಂದು ಹೇಳಿಬಿಡುತ್ತಾನೆ. ಸೀತೆಯನ್ನು ಬಿಟ್ಟು ಇನ್ನೊಬ್ಬಳನ್ನು ಕನಸಿನಲ್ಲಿಯೂ ನೆನೆಯುವುದಿಲ್ಲ.

ಶ್ರೀಕೃಷ್ಣನ ಚರಿತೆ ಇನ್ನೊಂದು ಬಗೆಯದು. ಅವನು ಜನ್ಮಕಾಲದಲ್ಲಿಯೇ ದೇವಕೀವಸುದೇವರಿಗೆ ತನ್ನ ದಿವ್ಯರೂಪವನ್ನು ತೋರಿಸಿ ತಾನು ಯಾರೆಂದು ತಿಳಿಸುತ್ತಾನೆ. ಅವನ ಬಾಲಲೀಲೆಯೂ ಅಮಾನುಷವಾದುದು. ಯಾದವರು, ಪಾಂಡವರು, ದೂರದ ರಾಜರು, ಪ್ರಜೆಗಳು ಎಲ್ಲರೂ ಆತನನ್ನು ಲೋಕೇಶ್ವರನೆಂದೂ ಮಹಾವಿಷ್ಣುವೆಂದೂ ಬಲ್ಲರು. ಲೋಕಕಲ್ಯಾಣಕ್ಕಾಗಿ ಅವತರಿಸಿದ ಮಹಾಪುರುಷನೆಂದು ತಿಳಿದಿದ್ದಾರೆ. ರುಕ್ಮಿ, ಜರಾಸಂಧ, ಶಿಶುಪಾಲ ಮೊದಲಾದವರು ಏನೆಂದು ಭಾವಿಸಿದ್ದರೋ ನಿಶ್ಚಿತವಾಗಿ ಹೇಳಲಾಗುವುದಿಲ್ಲ. ಅವನನ್ನು ಬಲ್ಲವರೂ ಅವನ ವಿಷಯದಲ್ಲಿ ಅಪ್ರಬುದ್ಧರಂತೆ ನಡೆದುಕೊಳ್ಳುವುದೊಂದು ಅಚ್ಚರಿ.

ಶ್ರೀಕೃಷ್ಣನೂ ತನ್ನ ಸ್ವರೂಪವನ್ನು ಮರೆಮಾಚುವುದಿಲ್ಲ. ಸಮಯ ಬಂದಾಗ ತಾನು ಪರಮಾತ್ಮನೆಂಬುದನ್ನು ಮಾತಿನಿಂದಲೂ ಕೃತಿಯಿಂದಲೂ ವ್ಯಕ್ತಪಡಿಸಿದ್ದಾನೆ.

ಶ್ರೀಕೃಷ್ಣನು ಏಕಪತ್ನೀವ್ರತವನ್ನು ಹಿಡಿದವನಲ್ಲ. ಅಷ್ಟ ಮಹಿಷಿಯರಲ್ಲದೆ ಸಾವಿರಾರು ಪತ್ನಿಯರು ಅವನಿಗಿದ್ದರು. ನಂದಗೋಕುಲದಲ್ಲಿ ಗೋಪಿಯರೊಡನೆ

ಶೃಂಗಾರಚೇಷ್ಟೆಯಲ್ಲಿ ನಿರತನಾದವನು ಆತ. ಆತನು ಶೃಂಗಾರಪ್ರಿಯನಾದರೂ ಹದಿನಾರು ಸಾವಿರದ ಒಂದುನೂರು ಮಂದಿ ಪತ್ನಿಯರಿದ್ದರೆಂಬುದು ನಮ್ಮ ಊಹೆಗೆ ನಿಲುಕುವುದಿಲ್ಲ. ಅವರಲ್ಲಿ ಲಕ್ಷಾಧಿಸಂಖ್ಯೆಯ ಮಕ್ಕಳನ್ನು ಪಡೆದನೆಂಬುದೂ ಊಹೆಗೆ ನಿಲುಕದು. ಅದರಿಂದ ಭಗವಂತನ ಅನಂತಶಕ್ತಿ, ಅನಂತವೈಭವಗಳು ಅಭಿವ್ಯಕ್ತವಾಗುತ್ತವೆಯೆಂದು ಭಾಗವತಕಾರರ ಆಶಯವಿರಬಹುದು.

ಒಂದೊಂದು ಮನೆಯಲ್ಲೂ ಏಕಕಾಲದಲ್ಲಿ ಶ್ರೀಕೃಷ್ಣನು ಆದರ್ಶಗೃಹಸ್ಥನಂತೆ ಸ್ನಾನ ಸಂಧ್ಯಾ ಹೋಮ ದಾನಾದಿ ಕರ್ಮಗಳಲ್ಲಿ ನಿರತನಾಗಿದ್ದನೆಂದು ಭಾಗವತದಲ್ಲಿ ಬಂದಿರುವುದನ್ನು ಓದುಗರು ಗಮನಿಸಬೇಕಾದದ್ದು ಅತ್ಯವಶ್ಯ.

ಗೋಪಿಕಾಲೀಲೆಗಳ ವಿಷಯವಾಗಿ ಡಾ॥ ಡಿ.ವಿ.ಜಿ.ಯವರ ಅಭಿಪ್ರಾಯವನ್ನು ಪೂರ್ವಾರ್ಧದ ನಿವೇದನೆಯಲ್ಲಿ ಸಂಕ್ಷೇಪಿಸಿ ಬರೆದದ್ದಾಗಿದೆ. ಈ ಪ್ರಸಂಗದಲ್ಲಿ ಇನ್ನೊಂದು ಮಾತು–

ಗೋಪಿಯರು ಶ್ರೀಕೃಷ್ಣನಲ್ಲಿಟ್ಟಿದ್ದ ನಿರತಿಶಯವಾದ ಪ್ರೇಮವು ಭಕ್ತಿಪ್ರಕಾರಗಳಲ್ಲಿ ಒಂದೆಂದು ಪ್ರತಿಪಾದಿಸುವುದು ಭಾಗವತಕಾರರ ಉದ್ದೇಶವಾಗಿರಬೇಕು. ಆ ಸ್ತ್ರೀಯರು ತಮ್ಮ ಗಂಡಂದಿರನ್ನು ಲಕ್ಷಿಸದೆ ಶ್ರೀಕೃಷ್ಣನಲ್ಲಿ ಅನುರಕ್ತರಾದದ್ದು ಲೋಕಶಾಸ್ತ್ರವಿರುದ್ಧವೇನೋ ಹೌದು. ಆದರೆ ಅವರ ಅನುರಾಗ ಒಬ್ಬ ಸಾಮಾನ್ಯ ಪುರುಷನಲ್ಲಾಗಿರದೆ ಸರ್ವಾತ್ಮನಾದ ಭಗವಂತನಲ್ಲಿ ಆಗಿತ್ತು. ಆದ್ದರಿಂದ ಅದು ಲೋಕಾತೀತವಾದ ಪರಮಧರ್ಮವೆಂದು ಭಾಗವತದ ಸಿದ್ಧಾಂತ. ಆ ಸ್ತ್ರೀಯರ ಪ್ರೇಮವು ಕಾಮಪ್ರಚೋದಿತವಾಗಿದ್ದರೂ ಅಶುದ್ಧವಲ್ಲ. ವಾಸ್ತವದಲ್ಲಿ ಶ್ರೀಕೃಷ್ಣನು ಗೋಪಿಯರಿಗೆ ಪರಪುರುಷನೇ ಅಲ್ಲ. ಅವನು ಸರ್ವಹೃದಯಾಂತರ್ಗತನಾದ ಆತ್ಮನೇ ಆಗಿದ್ದಾನೆ. ಅವನು ಯಾರಿಗೂ ಅನ್ಯನಲ್ಲ. ಭಕ್ತಿಯ ತೀವ್ರತೆಯಿಂದ ಒಬ್ಬ ಗಂಡಸು ಹೆಂಡತಿಮಕ್ಕಳ ವ್ಯಾಮೋಹವನ್ನು ಬದಿಗೊತ್ತಿ ಭಗವಂತನಲ್ಲಿ ಅನುರಕ್ತನಾಗುವುದು ಧರ್ಮವಾದರೆ, ಗೋಪಿಯರು ಗಂಡಂದಿರ ವ್ಯಾಮೋಹವನ್ನು ತೊರೆದು ಭಗವಂತನಲ್ಲಿ ಅನುರಕ್ತರಾಗುವುದು ಏಕೆ ಧರ್ಮವಾಗದು? ಇಲ್ಲಿ ಗಂಡಸು–ಹೆಂಗಸೆಂಬ ಭೇದವನ್ನೆಣಿಸುವುದು ಯುಕ್ತವಲ್ಲ. ಭಗವಂತನಲ್ಲಿರಿಸಿದ ಪರಮಪ್ರೇಮವೇ ಭಕ್ತಿ ಎನಿಸುತ್ತದೆ. ಆದರೆ ಗೋಪಿಯರ ಪ್ರೇಮವು ಕಾಮ ಪ್ರಚೋದಿತವಾದದ್ದೆಂಬ ಆಕ್ಷೇಪ ಬರಬಹುದು. ಆದರೇನು? ಯಾವ ಬುದ್ಧಿಯಿಂದ ಕೈಹಾಕಿದರೂ ಬೆಂಕಿ ಸುಡಲೇ ಬೇಕು. ಬಾಯಿಗೆ ಹಾಕಿದರೆ ಸಕ್ಕರೆ ಸಿಹಿಯಾಗಲೇಬೇಕು.

ಶ್ರೀಕೃಷ್ಣನ ಸಂದೇಶವನ್ನು ಹೊತ್ತು ಉದ್ಧವನು ಮಧುರೆಯಿಂದ ಬೃಂದಾವನಕ್ಕೆ

ಹೋಗುತ್ತಾನೆ. ಗೋಪಿಯರು ಅವನ ಬಳಿಗೆ ಬಂದು ತಮ್ಮ ವಿರಹದುಃಖವನ್ನು ಹಾಡಿಕೊಂಡು ಹುಚ್ಚಿಯರಂತೆ ಪರಿತಪಿಸುತ್ತಾರೆ. ಅವರು ಶ್ರೀಕೃಷ್ಣನಲ್ಲಿರಿಸಿದ ಪ್ರೇಮಾತಿಶಯವನ್ನು ಕಂಡು ವಿಸ್ಮಿತನಾದ ಉದ್ಧವನು ಹೇಳಿಕೊಳ್ಳುತ್ತಾನೆ–

**ಕ್ವೇಮಾಃ ಸ್ತ್ರಿಯೋ ವನಚರೀರ್ವ್ಯಭಿಚಾರದುಷ್ಟಾಃ**
**........................................................................॥ ೪೭–೫೯**

"ಕಾಡಿನಲ್ಲಿ ಅಲೆಯುವ ವ್ಯಭಿಚಾರ ಸ್ವಭಾವದ ಈ ಸ್ತ್ರೀಯರೆಲ್ಲಿ? ಕೃಷ್ಣಪರಮಾತ್ಮನ ವಿಷಯವಾಗಿ ಇವರಲ್ಲಿ ನೆಲೆಗೊಂಡ ಈ ದೃಢಭಕ್ತಿ ಎಲ್ಲಿ? ಗೊತ್ತಿಲ್ಲದೆ ಸೇವಿಸಿದರೂ ಶ್ರೇಷ್ಠವಾದ ಔಷಧವು ತಕ್ಕ ಫಲವನ್ನು ನೀಡುವಂತೆ, ಅರಿಯದೆ ಭಜಿಸುವ ಮೂಢರಿಗೂ ಪರಮಾತ್ಮನು ಸಾಕ್ಷಾತ್ತಾಗಿ ಶ್ರೇಯಸ್ಸನ್ನು ಕೊಡುತ್ತಾನೆ"

ಉದ್ಧವನು ವೃಂದಾವನದಲ್ಲಿ ತಿರುಗಾಡುತ್ತ ಗೋಪಿಯರ ಉತ್ಕಟಪ್ರೇಮವನ್ನೇ ಆಲೋಚಿಸುತ್ತಿದ್ದಾನೆ. ಅವನು ಭಾವಾವಿಷ್ಟನಾಗಿ

**..........................................................................**
**ಆಸಾಮಹೋ ಚರಣರೇಣುಜುಷಾಮಹಂ ಸ್ಯಾಂ**
**ವೃಂದಾವನೇ ಕಿಮಪಿ ಗುಲ್ಮಲತೌಷಧೀನಾಮ್॥ (೪೭–೬೧)**

"ಈ ಗೋಪಿಯರ ಪಾದಧೂಳಿಯಿಂದ ಪಾವನವಾದ ಪೊದರು, ಬಳ್ಳಿ, ಗಿಡಗಳಲ್ಲಿ ಒಂದಾಗಿ ನಾನೂ ವೃಂದಾವನದಲ್ಲಿ ಹುಟ್ಟಬಾರದೆ!"

"ಭಗವತ್‌ಪ್ರಾಪ್ತಿಮಾರ್ಗವು ಯಾವುದೆಂದು ವೇದಗಳು ಇನ್ನೂ ಹುಡುಕಾಡುತ್ತಿವೆ. ಈ ಗೊಲ್ಲತಿಯರು ಆರ್ಯಧರ್ಮಮಾರ್ಗದಲ್ಲಿ ಸಿದ್ಧಿಯನ್ನು ಪಡೆದು ವೇದಗಳಿಗೂ ಅಗೋಚರವಾದ ಮಾರ್ಗವನ್ನು ಈಗಾಗಲೇ ಸೇರಿಬಿಟ್ಟಿದ್ದಾರೆ!" ಎನ್ನುತ್ತಾನೆ.

ಒಳ್ಳೆಯದು. ಇದರಿಂದ ಗೊಲ್ಲತಿಯರ ವಿಷಯದಲ್ಲಿ ಸಮರ್ಥನೆಯಾದೀತು. ಆದರೆ ಧರ್ಮಪ್ರವರ್ತಕನಾದ ಶ್ರೀಕೃಷ್ಣನು ಆ ಮುಗ್ಧೆಯರ ಒಲವನ್ನು ನಿಂದ್ಯಮಾರ್ಗದಲ್ಲಿ ಬಳಸಿಕೊಳ್ಳಬಹುದೆ? ಅದಕ್ಕೆ ಪ್ರೋತ್ಸಾಹವನ್ನೀಯಬಹುದೆ? ಇದಕ್ಕೆ ಉತ್ತರ ಹೇಳಬೇಕಾದರೆ, ಕೃಷ್ಣನನ್ನು ಒಬ್ಬ ಮಾನವನೆಂದು ತಿಳಿಯಬಾರದು. ಅವನು ಲೋಕನಿಯಾಮಕನಾದ ಪರಮೇಶ್ವರನೇ ಆಗಿದ್ದು ಅದೇ ರೀತಿಯಲ್ಲಿ ಕೃಷ್ಣಾವತಾರದಲ್ಲಿಯೂ ನಡೆದುಕೊಂಡಿದ್ದಾನೆ. ಜನ್ಮಾಂತರಪುಣ್ಯದಿಂದ ಭಕ್ತರಲ್ಲಿ ಉದಿಸುವ ಒಂದು ಸದ್ಭಾವನೆಗೆ ಪುಷ್ಟಿಯನ್ನಿತ್ತು ಅದನ್ನು ಬೆಳೆಸಿ ಅನುಗ್ರಹಿಸುವುದು ಅವನ ಕಾರ್ಯವಿಧಾನ.

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ॥**
**ಭ.ಗೀ. ೪–೧೧**

'ಯಾರು ಯಾವ ಪ್ರಯೋಜನಕ್ಕಾಗಿ ನನ್ನನ್ನು ಭಜಿಸುತ್ತಾರೋ ಅವರಿಗೆ ಅದನ್ನಿತ್ತು ಅನುಗ್ರಹಿಸುತ್ತೇನೆ'

ಗೋಪಿಯರಿಗೆ ಅನ್ಯಾದೃಶವಾದ ಪ್ರೇಮಭಕ್ತಿ ಉಂಟಾಗಿತ್ತು. ಅದನ್ನು ಬೆಳೆಸಿ ಪ್ರೋತ್ಸಾಹಿಸಿ ಅನುಗ್ರಹಿಸುವುದು ಶ್ರೀಕೃಷ್ಣನ ಕರ್ತವ್ಯವಾಯಿತು. ಅವನು ಗೋಪಿಯರ ಪ್ರೇಮಬಂಧನಕ್ಕೆ ಸಿಕ್ಕಿದವನೇ ಅಲ್ಲ. ಕರ್ತವ್ಯದ ಕರೆಬಂದಾಗ ಆ ಬಂಧವನ್ನು ಹುಲ್ಲುಕಡ್ಡಿಯಂತೆ ಕಡಿದು ಮಧುರೆಗೆ ಹೊರಟುಬಿಟ್ಟನು. ತಿರುಗಿ ಬೃಂದಾವನವನ್ನೂ ಗೋಪಿಯರನ್ನೂ ಸ್ಮರಿಸಿಕೊಳ್ಳಲೇ ಇಲ್ಲ. ಬಹುವರ್ಷಗಳ ಮೇಲೆ ಕುರುಕ್ಷೇತ್ರದಲ್ಲಿ ಅವರ ಭೇಟಿಯಾದಾಗ, ಗೋಪಿಯರ ಪ್ರೇಮಭಕ್ತಿಯು ಪರಾಕಾಷ್ಠೆಯನ್ನೇ ಪಡೆದಿದ್ದಾಗ, ಅವರಿಗೆ ಅಧ್ಯಾತ್ಮವನ್ನು ಬೋಧಿಸಿ ತನ್ನ ಪರತತ್ತ್ವವನ್ನರುಹಿ ಸಂತೈಸಿ ಕಳಿಸುತ್ತಾನೆ.

ಭಗವಂತನಾದರೋ ನಿಸ್ಸಂಗ, ನಿತ್ಯಮುಕ್ತ. ಸರ್ವಾಂತರ್ಯಾಮಿ ಯಾಗಿ ಸರ್ವಭೂತಾತ್ಮಭೂತಾತ್ಮನಾದ ಪರಮಾತ್ಮನಿಗೆ ಪರರೆಂದರೆ ಯಾರು? ಪರಸ್ತ್ರೀಯರೆಂದರೆ ಯಾರು? ಅವನು ಸ್ಪರ್ಶಿಸದಿರುವ ಸ್ತ್ರೀ ಜಗತ್ತಿನಲ್ಲಿ ಯಾವಳಿದ್ದಾಳೆ? ಅವನಿಗೆ ಗೋಪ್ಯವಾದ ಸ್ಥಳವಾಗಲಿ ವ್ಯವಹಾರವಾಗಲಿ ಯಾವುದಿದೆ? ಸರ್ವವ್ಯಾಪಿಯಾದ ವಾಯುವನ್ನು ಪರಪುರುಷನೆಂದು ದೂರವಿಡುವ ಪತಿವ್ರತೆ ಯಾರು?

ಕುರುಕ್ಷೇತ್ರದಲ್ಲಿ ಬಹುಕಾಲಾನಂತರ ಗೋಪಿಯರನ್ನು ಸಂಧಿಸಿದಾಗ ಶ್ರೀಕೃಷ್ಣನು ಅವರಿಗೆ ಹೇಳುತ್ತಾನೆ–

"ನನ್ನಲ್ಲಿ ಭಕ್ತಿಯು ಪ್ರಾಣಿಗಳಿಗೆ ಮೋಕ್ಷವನ್ನು ದೊರಕಿಸಿಕೊಡುತ್ತದೆ. ಪುಣ್ಯವಶದಿಂದ ನಿಮಗೆ ನನ್ನಲ್ಲಿ ಪ್ರೇಮವುಂಟಾಯಿತು. ಅದು ನಿಮ್ಮನ್ನು ನನ್ನ ಬಳಿಗೆ ಸೇರಿಸಿ ಮೋಕ್ಷವನ್ನೀಯುವುದು. ಸಕಲ ಜೀವಜಾತಗಳಿಗೂ ನಾನೇ ಆದಿ, ನಾನೇ ಅಂತ, ಒಳಗೆ ಹೊರಗೆ ಎಲ್ಲವೂ ನಾನೇ" (೮೩–೪೫, ೪೭).

ಗೋಪೀಸಂಬಂಧವು ಶಾಸ್ತ್ರನಿಷಿದ್ಧವೆಂದು ಭಾಗವತಕಾರರಿಗೆ ಗೊತ್ತಿಲ್ಲದೆ ಇಲ್ಲ. ಪರೀಕ್ಷಿತನೇ ಶುಕಮುನಿಗಳಿಗೆ ಪ್ರಶ್ನೆ ಹಾಕಿದ್ದಾನೆ:

"ಜಗದೀಶ್ವರನಾದ ಭಗವಂತನು ಧರ್ಮಸ್ಥಾಪನೆಗಾಗಿಯೂ ಅಧರ್ಮವಿನಾಶಕ್ಕಾಗಿಯೂ ಶ್ರೀಕೃಷ್ಣನಾಗಿ ಅವತರಿಸಿದನಲ್ಲವೆ? ಧರ್ಮಸೇತುಗಳ ಉಪದೇಶಕನೂ ಕರ್ತನೂ ಆದ ಆತನೇ ಪರಸ್ತ್ರೀಸಂಗವೆಂಬ ಈ ಪಾಪಕೃತ್ಯವನ್ನು

